# ಮುಂಜಾವು

ವಾರಪತ್ರಿಕೆ.

ಸಂಪಾದಕ: ನಿಡಿಮನೆ ನಾಗರಾಜ್

೧೧ನೇ ವರ್ಷ    ೪ನೇ ಸಂಚಿಕೆ    ಬೆಲೆ ೬೦ ಪೈಸೆ

ಭಾನುವಾರ    ಕೊಪ್ಪ    ೨೭.೧-೧೯೯೧    ದೂರವಾಣಿ : ೧೧೪

## ಕೊಪ್ಪದಲ್ಲಿ ಆಕರ್ಷಕ ಗಣರಾಜ್ಯೋತ್ಸವ

ಕೊಪ್ಪ : ಗಣರಾಜ್ಯೋತ್ಸವ ಕಾರ್ಯಕ್ರಮ ಇಲ್ಲಿನ ಎಲ್ಲಾ ಶಾಲೆಗಳ ಪಾಲ್ಗೊಳ್ಳುವಿಕೆಯಲ್ಲಿ ಆಕರ್ಷಕವಾಗಿ ನಡೆಯಿತು.

ಬೆಳಿಗ್ಗೆ ಎಲ್ಲಾ ಶಾಲೆಗಳ ಮಕ್ಕಳು, ಎನ್‌ಸಿಸಿ ಮತ್ತು ಪೋಲೀಸ್ ತುಕಡಿಗಳಿಂದ ಪಟ್ಟಣದಲ್ಲಿ ಮೆರವಣಿಗೆ ನಂತರ ಪುರಸಭಾ ಮೈದಾನದಲ್ಲಿ ತಹಸೀಲ್ದಾರ್ ಜಿ. ಎಸ್. ನಾಯಕ್ ಧ್ವಜಾರೋಹಣ ಮಾಡಿ, ತಂಡಗಳಿಂದ ವಂದನೆ ಸ್ವೀಕರಿಸಿದರು. ಅನಂತರ ಮಕ್ಕಳ ಸಾಮೂಹಿಕ ಕವಾಯತು ನಡೆಯಿತು.

ನಂತರ ಪಿ ಬಿ ವಿವೇಕ್ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಯು.ಕೆ. ಶಾಮಣ್ಣ ಮುಖ್ಯ ಅತಿಥಿಯಾಗಿದ್ದರು. ನಾಗಲಿಂಗಯ್ಯ ಸ್ವಾಗತಿಸಿ, ಮಹಮದ್ ಸಾದಿಕ್ ವಂದಿಸಿದರು.

ಅನಂತರ ಸುಮಾರು ೨ ಗಂಟೆಗಳ ಕಾಲ ವಿವಿಧ ಶಾಲಾ ಮಕ್ಕಳಿಂದ ಆಕರ್ಷಕವಾದ ಮನರಂಜನಾ ಕಾರ್ಯಕ್ರಮಗಳು, ಕೊನೆಯಲ್ಲಿ 'ಭಾರತೀಯಂ' ತುಂಬಾ ಮನಮೋಹಕವಾಗಿ ನಡೆದವು.

# 'ದುರುಪಯೋಗನಡೆದಿಲ್ಲ'-ಭೂಬ್ಯಾಂಕ್ ಅಧ್ಯಕ್ಷ

**ಕೊಪ್ಪ : ಹರಿಜನರ ಹೆಸರಿನಲ್ಲಿ ಸಾಲ-ಸೌಲಭ್ಯಗಳ ದುರುಪಯೋಗವಾಗಿದೆ ಎಂಬ ವರದಿಗಳನ್ನು ಕರಿಮನೆ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷ ಬಿ. ಎಂ ಸುಧಾನಂದ ಅಲ್ಲಗಳೆದಿದ್ದಾರೆ**

ಅವರ ಪತ್ರಿಕಾ ಹೇಳಿಕೆಯ ಪೂರ್ಣ ಪಾಠ ಹೀಗಿದೆ :

ನಮ್ಮ ಬ್ಯಾಂಕಿನಲ್ಲಿ ಹಣ ದುರುಪಯೋಗ ಆಗಿರುವುದಾಗಿ ಕೆಲವು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಬಗ್ಗೆ ಈ ಕೆಳಗಿನಂತೆ ಸ್ಪಷ್ಟೀಕರಣ ನೀಡ ಬಯಸುತ್ತೇನೆ.

ಬ್ಯಾಂಕಿನ ವ್ಯಾಪ್ತಿಯ ಭೈರೆದೇವರು ಗ್ರಾಮದ ವಾಸಿಗಳಾದ ಭೈರಯ್ಯ ಬಿನ್ ಚೌಡಯ್ಯ, ಭೈರಯ್ಯ ಬಿನ್ ತಿಮ್ಮಯ್ಯ ಹಾಗೂ ಮಂಜಯ್ಯ ಬಿನ್ ಚೂಡಯ್ಯ ಇವರುಗಳಿಗೆ ವಿಶೇಷ ಘಟಕ ಯೋಜನೆಯಡಿ ೧೯೮೮-೮೯ನೇ ಸಾಲಿನಲ್ಲಿ ಸಾಲ-ಸವಲತ್ತುಗಳನ್ನು ನೀಡಲಾಗಿದೆ. ಪತ್ರಿಕೆಗಳ ವರದಿ ಹಾಗೂ ನಮ್ಮ ಬ್ಯಾಂಕಿನ ಇಲಾಖಾ ಅಧಿಕಾರಿಗಳ ಪತ್ರದ ಮೇರೆಗೆ ನಾನು ಈ ಬಗ್ಗೆ ಕೂಲಂಕಷ ತನಿಖೆ ನಡೆಸುವುದ್ದೇಶದಿಂದ ಸದರಿ ಫಲಾನುಭವಿಗಳಿಗೆ ಎರಡು ಬಾರಿ ಪತ್ರ ಬರೆದು ಬ್ಯಾಂಕಿಗೆ ಬಂದು ಸ್ಪಷ್ಟೀಕರಣ ನೀಡುವಂತೆ ತಿಳಿಸಿದ್ದರೂ, ಭೈರಯ್ಯ ಬಿನ್ ಚೌಡಯ್ಯ ಇವರ ಹೊರತು ಉಳಿದವರು ಬಂದಿಲ್ಲ.

ಸದರಿ ಭೈರಯ್ಯ ಅವರ ಹೇಳಿಕೆ ಹೀಗಿದೆ: "ಸದರಿ ಪ್ರಕರಣಗಳಿಗೂ ನನಗೂ ಯಾವ ಸಂಬಂಧವೂ ಇಲ್ಲ. ನಾನು ಬ್ಯಾಂಕಿನಿಂದ ಸಾಲದ ಸವಲತ್ತುಗಳನ್ನು ಪಡೆದಿರುವುದು ನಿಜ. ಅತ್ತಿಕೊಡಿಗೆ ಮಂಡಲ ಪ್ರಧಾನರು ಹಾಗೂ ಅತ್ತಿಕೊಡಿಗೆ ವ್ಯ. ಸೇ. ಸ. ಸಂಘದ ಕಾರ್ಯದರ್ಶಿಯೂ ಆಗಿರುವ ಬಿ. ಎನ್ ಭಾಸ್ಕರ್‌ರವರು ನನ್ನಿಂದ ಸುಮಾರು ಇಪ್ಪತ್ತೈದು ಪತ್ರಗಳಿಗೆ ಹೆಬ್ಬೆಟ್ಟನ್ನು ಒತ್ತಿಸಿಕೊಂಡಿದ್ದಾರೆ. ಅನಕ್ಷರಸ್ಥನಾದ ನನಗೆ ಅವು ಏನೆಂದು ತಿಳಿದಿಲ್ಲ"

ಗಾಡಿ ತಯಾರಿಸಿ ಕೊಟ್ಟ ಸದಾಶಿವ ಆಚಾರ್ ರವರು ಹಾಗೂ ಎತ್ತು, ಎಮ್ಮೆಗಳನ್ನು ಕೊಟ್ಟಿರುವ ಎ. ಎಂ. ಚಂದ್ರಶೇಖರ್ ಇವರುಗಳು ಬ್ಯಾಂಕಿನಿಂದ ಚೆಕ್ ಪಡೆದು ಗಾಡಿ, ಎತ್ತು, ಎಮ್ಮೆಗಳನ್ನು ಸದರಿ ಫಲಾನುಭವಿಗಳಿಗೆ ಕೊಟ್ಟಿರುವುದಾಗಿ ಹೇಳಿಕೆ ನೀಡಿದ್ದಾರೆ. ಖರೀದಿ ಸಮಿತಿಯ ಸದಸ್ಯರೂ ಈ ಬಗ್ಗೆ ಒಪ್ಪಿಗೆ ನೀಡಿದ್ದಾರೆ.

ಈ ಬಗ್ಗೆ ದಿನಾಂಕ ೨೪.೧.೧೯೯೧ರಂದು ಬ್ಯಾಂಕಿನ ಆಡಳಿತ ಮಂಡಳಿಯು ವಿಶೇಷ ಸಭೆ ಕರೆದು ದಾಖಲೆಗಳನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸಿದಾಗ, ಕಾರ್ಯದರ್ಶಿ ಹಾಗೂ ಸಿಬ್ಬಂದಿಗಳಿಂದ ಯಾವುದೇ ರೀತಿಯ ದಾಖಲೆಗಳ ಸೃಷ್ಟಿ ಆಗಿಲ್ಲವೆಂದೂ ಯಾವುದೇ ರೀತಿಯ ದುರುಪಯೋಗವೂ ಆಗಿಲ್ಲವೆಂದೂ ಕಂಡುಬಂದಿದೆ.

ನಮ್ಮ ಬ್ಯಾಂಕಿನ ನಿರ್ದೇಶಕರೇ ಆಗಿದ್ದು ಸದರಿ ಫಲಾನುಭವಿಗಳ ಆಯ್ಕೆಯನ್ನು ತಮ್ಮ ಮಂಡಲ ಪಂಚಾಯಿತಿಯಿಂದಲೇ ಮಾಡಿ ಕಳಿಸಿರುವ ಬಿ.ಎನ್. ಭಾಸ್ಕರರವರು ಈ ಬಗ್ಗೆ ಬ್ಯಾಂಕಿನಲ್ಲಿ ವಿಚಾರಿಸದೆ, ಪತ್ರ ವ್ಯವಹಾರವನ್ನೂ ಮಾಡದೆ ನೇರವಾಗಿ ಪತ್ರಿಕೆಗಳಿಗೆ, ಇಲಾಖಾಧಿಕಾರಿಗಳಿಗೆ ದೂರು ಸಲ್ಲಿಸಿರುವುದನ್ನು ಗಮನಿಸಿದರೆ, ಅವರು ಈ ಹಿಂದೆ ಸತತವಾಗಿ ಅನೇಕ ಆಡಳಿತ ಮಂಡಳಿ ಸಭೆಗಳಿಗೆ ಹಾಜರಾಗದೆ ತಮ್ಮ ನಿರ್ದೇಶಕ ಹುದ್ದೆಯನ್ನು ಕಳೆದುಕೊಂಡಿರುವುದರಿಂದ ಬ್ಯಾಂಕಿನ ಬಗ್ಗೆ ವೈಯಕ್ತಿಕ ದ್ವೇಷದಿಂದ ಈ ಪ್ರಕರಣವನ್ನು ಸೃಷ್ಟಿ ಮಾಡಿರುವುದು ವೇದ್ಯವಾಗುತ್ತದೆ.

ಒಂದು ಪ್ರತಿಷ್ಠಿತ ಸಂಸ್ಥೆಯ ಗೌರವವನ್ನು ಹಾಳು ಮಾಡುವುದು ಬಹಳ ಸುಲಭ. ಸಂಸ್ಥೆಯೊಂದನ್ನು ಪ್ರತಿಷ್ಠಿತವಾಗಿ ರೂಪಿಸುವುದು ಅಷ್ಟೇ ಕಷ್ಟದ ಕೆಲಸ. ಈ ಪ್ರಕರಣಗಳ ಸೃಷ್ಟಿಯಿಂದ ರೈತರ ಜೀವನಾಡಿಯಾಗಿರುವ ಹಾಗೂ ಉಪಯುಕ್ತ ಸೇವೆ ಸಲ್ಲಿಸುತ್ತಿರುವ ಈ ಸಂಸ್ಥೆಯ ಪ್ರತಿಷ್ಠೆಗೆ, ಅಧಿಕಾರಿಗಳ ಉತ್ಸಾಹಕ್ಕೆ ತಣ್ಣೀರೆರಚಿದಂತಾಗಿದೆ. ಇದು ಖಂಡನಾರ್ಹ.

ಇನ್ನು ಮುಂದೆಯೂ ನಮ್ಮ ಬ್ಯಾಂಕ್ ವಿಶ್ವಸನೀಯ ಸೇವೆಯನ್ನು ಈ ಭಾಗದ ರೈತರಿಗೆ ಹಾಗೂ ಬ್ಯಾಂಕಿನ ಸದಸ್ಯರಿಗೆ ಸದಾ ಮಾಡುತ್ತದೆ ಎಂಬ ಭರವಸೆಯನ್ನು ನಮ್ಮ ಬ್ಯಾಂಕಿನ ಆಡಳಿತ ಮಂಡಳಿ ಹಾಗೂ ಸಿಬ್ಬಂದಿಗಳ ಪರವಾಗಿ ನೀಡುತ್ತೇನೆ.

## ಶಂಕರ್ ಸಾರಿಗೆ ವಿವಾದ ಇನ್ನೂ ನನೆಗುದಿಯಲ್ಲಿ

ಕೊಪ್ಪ : ಇಲ್ಲಿನ ಶಂಕರ್ ಸಾರಿಗೆ ಸಂಸ್ಥೆಯ ಕಾರ್ಮಿಕ ಮುಷ್ಕರ ಮುಂದುವರಿದಿದೆ. ಜ. ೧೬ ರಿಂದ ೨೨ಕ್ಕೆ ಮುಂದೂಡಲ್ಪಟ್ಟಿದ್ದ ಮಾತುಕತೆಗಳು ಮತ್ತೂ ೨ ದಿನದ ನಂತರವೂ ಯಾವುದೇ ಫಲ ನೀಡಿಲ್ಲ. ಪುನಃ ಈ ತಿಂಗಳ ೩೦ ಅಥವಾ ೩೧ಕ್ಕೆ ಸಾರಿಗೆ ಸಚಿವ ಅಜೀಜ್ ಸೇಠ್ ಸಮ್ಮುಖದಲ್ಲಿ ಕಾರ್ಮಿಕ ಸಂಘ ಮತ್ತು ಮಾಲೀಕರ ನಡುವೆ ಮಾತುಕತೆ ನಡೆಯುವ ನಿರೀಕ್ಷೆಯಿದ್ದು, ಆಗ ವಿವಾದಕ್ಕೊಂದು ತೆರೆ ಬೀಳಬಹುದೆಂಬ ಆಶಾಭಾವ ವ್ಯಕ್ತವಾಗಿದೆ.

## ಔಚಿತ್ಯ ಪರಿಜ್ಞಾನದ ಅಭಾವ !

ಗಣರಾಜ್ಯೋತ್ಸವದಂಥ ಸಮಾರಂಭಗಳೆಂದರೆ ಮುಖ್ಯವಾಗಿ ಶಾಲಾ ಮಕ್ಕಳ ಕಾರ್ಯಕ್ರಮ. ಅಲ್ಲಿ ರಾಜಕೀಯ ಭಾಷಣಗಳಿಗಾಗಲಿ, ಅನಗತ್ಯವಾಗಿ ಸಾಲು ಸಾಲು 'ಅತಿಥಿ'ಗಳಿಗಾಗಲಿ, ಅವಕಾಶವಿಲ್ಲ. ಆದರೆ ಕೊಪ್ಪದ ಗಣರಾಜ್ಯೋತ್ಸವ ಸಮಾರಂಭದಲ್ಲಿ ಈ ಔಚಿತ್ಯ ಪ್ರಜ್ಞೆಯ ಲವಲೇಶವೂ ಕಂಡು ಬರಲಿಲ್ಲ.

ಮೊದಲಿಗೆ, ಸ್ವಾಗತ ಭಾಷಣಕ್ಕೆ ಸುಮಾರು ೧೦ ನಿಮಿಷ ತೆಗೆದುಕೊಂಡ ಬಿಡಿಒ ನಾಗಲಿಂಗಯ್ಯ ಮುಖಂಡರುಗಳನ್ನು–ಮುಖ್ಯವಾಗಿ ಶಾಸಕರನ್ನು–ನಾಲ್ಕೈದು ನಿಮಿಷ ಹೊಗಳುತ್ತ ನಿರ್ಲಜ್ಜ ಭಟ್ಟಂಗಿತನ ಪ್ರದರ್ಶಿಸಿದರು !

ಅನಂತರ ಧ್ವನಿವರ್ಧಕದ ಮೇಲೆ ಆಧಿಪತ್ಯ ಸ್ಥಾಪಿಸಿದ ಶಾಸಕ ಶಾಮಣ್ಣನವರ ಸುಮಾರು ನಲವತ್ತು ನಿಮಿಷಗಳ ಭಾಷಣವಂತೂ ಔಚಿತ್ಯ ಪರಿಜ್ಞಾನದ ವಿಕಟ ವ್ಯಂಗ್ಯದಂತೆ ಸಭಿಕರಿಗೆಲ್ಲ ಭಾಸವಾಯಿತು. ಅದರ ನಡುವೆ, "ಇಂದು ರಾಜ್ಯಾಂಗ ತಿದ್ದುಪಡಿ ಮಾಡಿದ ದಿನ"; "ಮಕ್ಕಳು ನಾಳೆ ರಾಜ್ಯಾಂಗ ತಿದ್ದುಪಡಿ ಮಾಡಬೇಕು....ಬಾರದು...." ಮುಂತಾಗಿ ಅನೇಕ ಆಭಾಸಗಳನ್ನು ಮಾಡಿದ್ದಲ್ಲದೆ, ಶಾಸಕರಾಗಿ ತಮ್ಮ ಸಾಧನೆ-ವಿಫಲತೆಗಳು, ಅದಕ್ಕೆ ಕಾರಣಗಳು, ರಾಜ್ಯಾಂಗ-ಶಾಸಕಾಂಗಗಳ ಇತಿ–ಮಿತಿಗಳು, ಶಂಕರ್ ಸಾರಿಗೆ ಮುಷ್ಕರ, ತನ್ನ ಸುದೀರ್ಘ ರಾಜಕೀಯ ಸೇವೆ–ಮುಂತಾಗಿ ಒಂದೇ ಸಮನೆ ಕೊರೆದರು. ಕೊನೆಗೆ ತನಗೆ ಈ ಅವಕಾಶ ಕಲ್ಪಿಸಿದಕ್ಕಾಗಿ ಕಾರ್ಯಕ್ರಮದ ವ್ಯವಸ್ಥಾಪಕರನ್ನು ಮಾತ್ರವಲ್ಲದೆ ಕಾರ್ಯಕರ್ತರನ್ನೂ ಸ್ಮರಿಸಲು ಮರೆಯಲಿಲ್ಲ ! ಜೊತೆಗೆ ತಮ್ಮ ಮಾಮೂಲಿ "ಬಹುಶ"ವನ್ನು ೪೭ ಬಾರಿ ಉಚ್ಚರಿಸಿದರು; "ನಾನಾದರೂ" ೧೪ ಬಾರಿ !! ಪಿ. ಬಿ ವಿವೇಕ್ ಮತ್ತು ಮಹಮದ್ ಸಾದಿಕ್ ಮಾತ್ರ ಚುಟುಕಾಗಿ ಮುಗಿಸಿದರು.

ಇಷ್ಟಾಗುವಾಗ, ತಮ್ಮ ಪುಟ್ಟ ಮಕ್ಕಳ ಕಾರ್ಯಕ್ರಮಕ್ಕಾಗಿ ಕಾದು ಸೊರಗಿದ ಬಹುತೇಕ ಸಾರ್ವಜನಿಕರು ಖಾಲಿಯಾಗಿದ್ದರು. ತಾಯಂದಿರು ಮಾತ್ರ ಛಲ ಬಿಡದೆ ಕಾದಿದ್ದರಾದರೂ, "ಅಲ್ರೀ, ಈ ಪುಟ್ಟ ಮಕ್ಕಳು ಬೆಳಗ್ಗೆ ೬ಕ್ಕೇ ಎದ್ದು, ಸರಿಯಾಗಿ ತಿಂಡಿಯನ್ನೂ ತಿನ್ನದೆ ಬಂದಿವೆ. ಅವನ್ನು ಉರಿಬಿಸಿಲಿನಲ್ಲಿ ನಿಲ್ಲಿಸಿಕೊಂಡು ಬೆಳಗ್ಗೆ ೯ ಗಂಟೆಗೆ ಪಟ್ಟಾಗಿ ತಿಂದು ಬಂದ ಇವರುಗಳು ನೆರಳಲ್ಲಿ ತಣ್ಣಗೆ ಕೂತು ಯಾರಿಗಾಗಿ ಹೀಗೆ ಕೊರೆಯಬೇಕ್ರಿ? ಇನ್ನು ಆ ಮಕ್ಕಳೆಲ್ಲ ಕಾರ್ಯಕ್ರಮ ಮುಗಿಸಿ ಮನೆ ಸೇರುವುದು ಎಷ್ಟೊತ್ತಿಗೆ..." ಮುಂತಾಗಿ ಶಪಿಸುತ್ತಲೇ ಇದ್ದರು.

ಆ ಮಕ್ಕಳು ನಿಜವಾಗಿಯೂ ಮನೆ ಸೇರಿದ್ದು ಮಧ್ಯಾಹ್ನ ೧ ಗಂಟೆಗೂ ಮೀರಿ; ಹಸಿದು ಹಣ್ಣಾಗಿ, ಸೊರಗಿ ಸಣ್ಣಾಗಿ !

ಇಂಥ ಅವಿವೇಕಿತನಕ್ಕೆ ಧಿಕ್ಕಾರವಿರಲಿ !!

—'ಮುಂಜಾವು'

# ಕೊಲ್ಲಿ ಬಿಕ್ಕಟ್ಟು: ಅಮೆರಿಕನ್ ಮತ್ತು ಐರೋಪ್ಯ ಸಾಮ್ರಾಜ್ಯಶಾಹಿಗಳ ವಿಶ್ವಾಧಿಪತ್ಯದ ತಂತ್ರಕ್ಕೊಂದು ನೆಪ !

'ಗಲ್ಫ್' ಎಂದು ಈಚೆಗೆ ಜನ ಬಳಕೆಗೆ ಬಂದಿರುವ ಮಧ್ಯಪ್ರಾಚ್ಯದ ಕೊಲ್ಲಿ ಪ್ರದೇಶದಲ್ಲಿ ಇರಾಕ್ ದೇಶಕ್ಕೂ, ಅಮೆರಿಕ ನೇತೃತ್ವದ ಪಾಶ್ಚಿಮಾತ್ಯ ದೇಶಗಳಿಗೂ ಜ. ೧೭ ರಿಂದ ಆರಂಭವಾಗಿರುವ ಭೀಕರ ಕದನ ಅನಿರ್ದಿಷ್ಟವಾಗಿ ಮುಂದುವರಿದೇ ಇದೆ.

ಇಡೀ ವಿಶ್ವದ ಪೆಟ್ರೋಲಿಯಂ ಸಂಪನ್ಮೂಲದ ಶೇ. ೬೫ ರಷ್ಟು ಕೊಲ್ಲಿ ಪ್ರದೇಶದಲ್ಲಿದೆ. ತನ್ನ ಅವಶ್ಯಕತೆಯ ಶೇ. ೫೦ರಷ್ಟನ್ನು ಅಲ್ಲಿಂದಲೇ ಆಮದು ಮಾಡಿಕೊಳ್ಳುವ ಅಮೆರಿಕಾ, ಶೇ. ೬೦ ರಿಂದ ೭೦ ರವರೆಗೂ ಆಮದು ಮಾಡಿಕೊಳ್ಳುವ ಯೂರೋಪ್ ದೇಶಗಳು ಮಾತ್ರವಲ್ಲದೆ, ಭಾರತವೂ ಸೇರಿದಂತೆ ಎಲ್ಲ ಹಿಂದುಳಿದ ರಾಷ್ಟ್ರಗಳೂ ಪೆಟ್ರೋಲಿಯಂ ಎಣ್ಣೆಗಾಗಿ ಕೊಲ್ಲಿ ದೇಶಗಳನ್ನೇ ನೆಚ್ಚಿಕೊಂಡಿವೆ; ಅಂತೆಯೇ ಈ ಯುದ್ಧದಿಂದ ಅವುಗಳ ಕೈಗಾರಿಕಾ ಮತ್ತು ಹಣಕಾಸು ಸ್ಥಿತಿಗತಿ ತೀವ್ರ ಸಂಕಷ್ಟಕ್ಕೆ ಸಿಕ್ಕಿದೆ.

ಈ ಹಿನ್ನೆಲೆಯಿಂದ ನೋಡಿದಾಗ, ಐದು ತಿಂಗಳ ಹಿಂದೆ ನೆರೆಯ ಕುವೈತ್ ದೇಶವನ್ನು ಆಕ್ರಮಿಸಿಕೊಳ್ಳುವ ಮೂಲಕ ಈ ಯುದ್ಧಕ್ಕೆ ಮೂಲ ಕಾರಣನಾದ ಇರಾಕ್ ಅಧ್ಯಕ್ಷ ಸದ್ದಾಂ ಹುಸೇನ್ ಇಂದು ವಿಶ್ವದ ಬಹು ದೊಡ್ಡ ಶತ್ರುವಾಗಿ, ರಕ್ಕಸನಾಗಿ ಕಾಣುತ್ತಿದ್ದಾನೆ; ಈತನ ವಿರುದ್ಧ ವಿಶ್ವಸಂಸ್ಥೆಯಲ್ಲಿ ವಿಶ್ವಾಭಿಪ್ರಾಯವನ್ನು ಒಗ್ಗೂಡಿಸಿ, ಕುವೈತ್ ಬಿಡುಗಡೆಗಾಗಿ ಪಾಶ್ಚಿಮಾತ್ಯ ರಾಷ್ಟ್ರಗಳ 'ಮಿತ್ರಪಡೆ'ಯ ನೇತೃತ್ವ ವಹಿಸಿ ಯುದ್ಧಕ್ಕಿಳಿದಿರುವ ಅಮೆರಿಕಾ ದೊಡ್ಡ 'ಆಪದ್ಬಾಂಧವ–ಅನಾಥ ರಕ್ಷಕ' ನಂತೆ ಕಾಣುತ್ತಿದೆ.

ಅಂತೆಯೇ ಈ ಯುದ್ಧ ಒಂದು ಅನಿವಾರ್ಯವಾದ ಮತ್ತು ಯುಕ್ತವಾದ ಕ್ರಿಯೆಯೆಂದೂ ಮೇಲ್ನೋಟಕ್ಕೆ ಅನ್ನಿಸುತ್ತದೆ.

ಆದರೂ—ಕುವೈತ್ ಬಿಡುಗಡೆಗೆ ಇಷ್ಟು ದೊಡ್ಡ ಕಾರ್ಯಾಚರಣೆ ಯಾಕೆ ಬೇಕಾಯಿತು? ಇರಾಕ್‌ಗೆ ಇಂಥ ಬಲ ಹೇಗೆ ಬಂತು? ವಿಶ್ವಸಂಸ್ಥೆಯು ಪ್ಯಾಲೆಸ್ತೀನಿಯರ ಮಾತೃ ಭೂಮಿ ಬಿಟ್ಟುಕೊಡಲು ಇಸ್ರೇಲನ್ನು ಒತ್ತಾಯಿಸಿ ಹಾಗೂ ಕರಿಯರ ಮೇಲಿನ ಬಿಳಿಯರ 'ಅಪಾರ್ಥೇಯ್ಡ್' ದಬ್ಬಾಳಿಕೆ ನಿಲ್ಲಿಸಿ ಸ್ವಾತಂತ್ರ್ಯ ನೀಡಲು ದ.ಆಫ್ರಿಕ ಸರ್ಕಾರವನ್ನು ಒತ್ತಾಯಿಸಿ ಪಾಸುಮಾಡಿದ ಹತ್ತಾರು ನಿರ್ಣಯಗಳು ಗಾಳಿಗೆ ತೂರಿ ಹೋದರೂ ಅವುಗಳ ಮೇಲೆ ಯುದ್ಧ ಮಾಡುವಂತೆ ಆದೇಶಿಸದೆ, ಇರಾಕ್ ಮೇಲೆ ಮಾತ್ರ ಯುದ್ಧ ಮಾಡಲು ಏಕೆ ಅಪ್ಪಣೆ–ಅನುಮತಿ ನೀಡಿ[illegible]? ಅದೂ ಕೂಡ, ಅಂಥ ಸರ್ಕಾರಗಳಿಗೆ [illegible]ಗೂ ನಗ್ನವಾಗಿ ಕುಮ್ಮಕ್ಕು ಕೊಡು[illegible]ರುವ ಅಮೆರಿಕಕ್ಕೇ ಏಕೆ ಈ ಯುದ್ಧದ [illegible]ದಾರಿ, ನೇತೃತ್ವ? ಹಾಗಾದರೆ ಕೊಲ್ಲಿ ಬಿಕ್ಕಟ್ಟಿಗೆ ಶಾಂತಿಯುತ ಪರಿಹಾರ ಇನ್ನೂ ಇದೆಯೇ; ಇದ್ದರೆ ಅದೇನು?—ಎಂಬಿತ್ಯಾದಿ ಪ್ರಶ್ನೆಗಳಿಗೆ ಕೂಡ ನಾವು ಉತ್ತರ ಕಂಡುಕೊಳ್ಳುವುದು ಒಳ್ಳೆಯದು.

### ಇರಾಕ್ ವಿವರಣೆ – ನಿಜಸ್ಥಿತಿ

ಕುವೈತನ್ನು ಆಕ್ರಮಿಸಿಕೊಂಡಿದ್ದಕ್ಕೆ ಇರಾಕ್ ಹಲವು ಕಾರಣಗಳನ್ನು ಮುಂದಿಟ್ಟಿದೆ— ೧) ಚಾರಿತ್ರಿಕವಾಗಿ ಕುವೈತು ಇರಾಕಿನ ಅಂಗವೇ ಆಗಿತ್ತು; ಅಮೇರಿಕನ್ ಮತ್ತು ಯುರೋಪಿಯನ್ ಸಾಮ್ರಾಜ್ಯಶಾಹಿಗಳು ಅಗ್ಗದ ಪೆಟ್ರೋಲಿಯಂ ದುರಾಸೆಗಾಗಿ ಕುವೈತನ್ನು ಪ್ರತ್ಯೇಕಗೊಳಿಸಿ ತಮ್ಮ ಕೈಗೊಂಬೆಯಾಗಿಟ್ಟುಕೊಂಡಿದ್ದರು. ೨) ತೈಲ ರಫ್ತು ದೇಶಗಳ ಒಕ್ಕೂಟದ (ಒಪೆಕ್) ನಿರ್ಣಯಕ್ಕೆ ವಿರುದ್ಧವಾಗಿ ಕುವೈತು ಹೆಚ್ಚು ತೈಲ ಉತ್ಪಾದಿಸಿರುವುದರಿಂದ ತನಗೆ ೧೪ ಬಿಲಿಯನ್ ಡಾಲರ್ ನಷ್ಟವಾಗಿದೆ (ಒಂದು ಬಿಲಿಯನ್=೧೦೦೦ ಮಿಲಿಯನ್; ಅಂದರೆ ೧೦೦ ಕೋಟಿ). ೩) ರುಮೈಲಾಹ್ ಜಂಟಿ ತೈಲ ಬಾವಿಗಳಿಂದ ಕುವೈತ್ ತೈಲ ಕದ್ದಿದ್ದರಿಂದ ತನಗೆ ೨೪ ಬಿಲಿಯನ್ ಡಾಲರ್ (೨೪೦೦ ಕೋಟಿ ಡಾಲರ್) ನಷ್ಟ ಪರಿಹಾರ ಕೊಡಬೇಕು. ೪) ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕುವೈತು ಬ್ಯಾರೆಲ್‌ಗೆ ೨೫ ಡಾಲರಿನಂತೆ ತೈಲ ಮಾರಲು ಒಪ್ಪದಿರುವುದೂ ಸರಿಯಲ್ಲ. ಈ ಎಲ್ಲ ಕಾರಣಗಳಿಂದ ಅದರ ಮೇಲೆ ಯುದ್ಧ ಅನಿವಾರ್ಯವಾಯಿತು ಎಂಬುದು ಇರಾಕ್ ವಿವರಣೆ.

ಆದರೆ ಇವು ಇರಾಕಿನ ಬೇರೊಂದು ಉದ್ದೇಶದ ಈಡೇರಿಕೆಗೆ ಕೆಲವು ನೆಪಗಳು ಮಾತ್ರ. ಇರಾಕಿಗೆ ತನ್ನ ತೈಲವನ್ನು ರಫ್ತು ಮಾಡಲು ಬಂದರು ಸೌಲಭ್ಯವಿಲ್ಲ. ತನ್ನ ಕೇವಲ ೨೯ ಕಿ ಮೀ. ಕರಾವಳಿಯನ್ನೂ ಅದು ಬಳಸಲು ಆಗದಂತೆ, ಕುವೈತಿಗೆ ಸೇರಿದ ಬೂಬಿಯನ್ ಮತ್ತು ವಾರ್ಭಾ ಎಂಬ ಎರಡು ದ್ವೀಪಗಳು ಅಡ್ಡಿಯಾಗಿವೆ.

ಹೀಗಾಗಿ, ವಿಶ್ವದ ತೈಲ ಸಂಪನ್ಮೂಲದ ಶೇ. ೧೦ ರಷ್ಟನ್ನು ಹೊಂದಿರುವ ಇರಾಕ್, ಅದನ್ನು ನೂರಾರು ಕಿ. ಮೀ. ದೂರ ಕೊಳವೆಗಳಲ್ಲಿ ಸಾಗಿಸಿ, 'ತುರ್ಕಿಯ' ಯಾಮೂರ್ಥಾಲಿಕ್ ಮತ್ತು ಸೌದಿ ಅರೇಬಿಯದ ಯಾನ್ಬೂ ಬಂದರುಗಳ ಮೂಲಕ ಸಾಗಿಸಬೇಕಾಗಿದೆ. ಇದು ದುಬಾರಿ ಮಾತ್ರವಲ್ಲದೆ, ಇದಕ್ಕಾಗಿ ಇರಾಕ್ ಆ ದೇಶಗಳ ಮೇಲೆ ಶಾಶ್ವತವಾಗಿ ಅವಲಂಬಿಸಿಕೊಂಡಿರಬೇಕಾಗಿದೆ. ಇತ್ತ ಇರಾಕ್–ಇರಾನ್ ನಡುವಿನ ಶತ್–ಅಲ್–ಅರಬ್ ಜಲಸಂಧಿಯ ಮೇಲೆ ಆಧಿಪತ್ಯ ಪಡೆಯಲು ಇರಾನಿನ ಮೇಲೆ ೮ ವರ್ಷ ಯುದ್ಧ ಮಾಡಿ ೧೦ ಲಕ್ಷ ಸೈನಿಕರನ್ನು ಕಳೆದುಕೊಂಡರೂ ಆ ಜಲಮಾರ್ಗ ದಕ್ಕಲಿಲ್ಲ. ಆದ್ದರಿಂದ ಬೂಬಿಯನ್, ವಾರ್ಭಾ ದ್ವೀಪಗಳನ್ನು ವಶಪಡಿಸಿಕೊಂಡು, ತನ್ನ ಜಲ ಮಾರ್ಗದ ಅವಶ್ಯಕತೆ ಪೂರೈಸಿಕೊಳ್ಳಲೆಂದೇ ಅದು ಕುವೈತನ್ನು ಆಕ್ರಮಿಸಿಕೊಂಡಿದ್ದು.

ಇರಾನ್ ಜೊತೆಗಿನ ಯುದ್ಧದಿಂದ ಉಂಟಾಗಿರುವ ಆರ್ಥಿಕ ಬಿಕ್ಕಟ್ಟಿನಿಂದ ಹೊರಬರುವುದೂ ಕೂಡ ಈ ದಾಳಿಯ ಇನ್ನೊಂದು ಉದ್ದೇಶ.

### ಅಮೆರಿಕದ ಉಸಾಬರಿ

ಸದ್ದಾಂ ಹುಸೇನನೇನೋ ಒಬ್ಬ ಸ್ಥಳೀಯ ಮಹತ್ವಾಕಾಂಕ್ಷಿಯಾದ ಆಡಳಿತಗಾರ; ಮುಂದೆ ಇಡೀ ಕೊಲ್ಲಿ ಪ್ರದೇಶದ ಮೇಲೆ ತನ್ನ ಹಿಡಿತ ಸ್ಥಾಪಿಸಿ, ಅಲ್ಲಿನ ಪೆಟ್ರೋಲಿಯಂ ಉತ್ಪನ್ನದ ಮೂರರಲ್ಲೆರಡು ಭಾಗದಷ್ಟನ್ನು ತನ್ನ ಅಧೀನಕ್ಕೊಳಪಡಿಸಿಕೊಳ್ಳಬಹುದು; ಇದರಿಂದ ವಿಶ್ವದ ಎಲ್ಲ ರಾಷ್ಟ್ರಗಳೂ ತೈಲಕ್ಕೆ ಹೆಚ್ಚು ಬೆಲೆ ತೆರಬೇಕಾಗಬಹುದು— ಸರಿ.

ಆದರೆ, ಪ್ರಪಂಚದ ಎಲ್ಲ ದೇಶಗಳಲ್ಲೂ ತನಗಿಷ್ಟವಾಗದ ಸರ್ಕಾರಗಳನ್ನು ಉರುಳಿಸುತ್ತ, ತನ್ನ ಅಧೀನದಲ್ಲಿರಬಲ್ಲ ಆಡಳಿತಗಾರರನ್ನೇ ಅಧಿಕಾರದಲ್ಲಿ ಕೂರಿಸುವ ಕೆಲಸವನ್ನು ಪ್ರತಿ ದಿನವೆಂಬಂತೆ ನಡೆಸುತ್ತಿರುವ ಅಮೆರಿಕಕ್ಕೆ ಕುವೈತನ್ನು 'ವಿಮೋಚನೆ' ಗೊಳಿಸುವ ಉಸಾಬರಿ ಏಕೆ ? ಅದಕ್ಕೆ ಬೆಂಬಲವಾಗಿ ನಿಲ್ಲುವ 'ನಿಷ್ಠೆ' ಇತರ ಪಾಶ್ಚಿಮಾತ್ಯ ದೇಶಗಳಿಗೆ ಏಕೆ?

ಏಕೆಂದರೆ, ಇದು ಕೇವಲ ಒಂದು ದೇಶ ಇನ್ನೊಂದು ದೇಶವನ್ನು ಕಬಳಿಸಿದ ಪ್ರಶ್ನೆ ಮಾತ್ರ ಅಲ್ಲ. ಈ ಕೊಲ್ಲಿ ರಾಷ್ಟ್ರಗಳಲ್ಲಿರುವ ತೈಲ ಸಂಪತ್ತೇ ಇಲ್ಲಿ ಪ್ರಶ್ನೆ. ಅದನ್ನು ಅಗ್ಗದ ಬೆಲೆಗೆ ಪಡೆದರೆ ಸಾಲದು; ಆ ಇಡೀ ಪ್ರದೇಶ ಶಾಶ್ವತವಾಗಿ ತಮ್ಮ ಅಧೀನದಲ್ಲಿರಬೇಕು. ಇಡೀ ಅರಬ್ ಜನತೆಯನ್ನೆಲ್ಲ ಒಂದುಗೂಡಿಸಿ, ಅವರಲ್ಲಿ ಆತ್ಮಾಭಿಮಾನ ತುಂಬುವ ಕನಸು ಹೊತ್ತ 'ಬಾಥ್' ಪಕ್ಷದ ಆದರ್ಶ. ಧೀರ ನಾಯಕನಾಗಿ ಸದ್ದಾಂ ಬೆಳೆದರೆ, ಈಗ ಪಾಶ್ಚಿಮಾತ್ಯರ ಕೈಗೊಂಬೆಗಳಾಗಿರುವ ಕುವೈತ್, ಸೌದಿ ಅರೇಬಿಯ, ಟರ್ಕಿ, ಜೋರ್ಡಾನ್‌ನಂಥ ದೇಶಗಳಲ್ಲೂ ಜನ ಪಾಶ್ಚಿಮಾತ್ಯ ಸಾಮ್ರಾಜ್ಯ ಶಾಹಿಗಳನ್ನು ಧಿಕ್ಕರಿಸಿ ನಿಂತರೆ, ಕೊಲ್ಲಿಯ ಪೆಟ್ರೋಲಿಯಂನ್ನೇ ಶೇ. ೬೦–೭೦ ರವರೆಗೂ ಅವಲಂಬಿಸಿರುವ ಆ ಶ್ರೀಮಂತ ದೇಶಗಳ ಆಧುನಿಕ ಅಭಿವೃದ್ಧಿಯೆಲ್ಲ ಕುಸಿದು ಬೀಳುತ್ತದೆ.

(ಮುಂದಿನ ಪುಟಕ್ಕೆ

ಸೂರಳಿಯಲ್ಲಿ ಪುರಂದರ ದಾಸರ–ತ್ಯಾಗರಾಜರ ಆರಾಧನೋತ್ಸವ :

# ಕಾನನದ ಪ್ರಶಾಂತತೆಯಲ್ಲಿ ಸುಮಧುರ ಸಂಗೀತ ಸೇವೆ

ಹರಿಹರಪುರ ಸಮೀಪದ ಸೂರಳಿಯ ಪ್ರಶಾಂತ ವಾತಾವರಣದಲ್ಲಿ ಆದಿಗುರು ಪುರಂದರ ದಾಸರ ಮತ್ತು ನಾದಯೋಗಿ ತ್ಯಾಗರಾಜರ ಆರಾಧನಾ ಮಹೋತ್ಸವದ ಸತತ ೯ನೇ ವರ್ಷದ ಕಾರ್ಯಕ್ರಮಗಳು ಈಚೆಗೆ ಆಕರ್ಷಕವಾಗಿ ನಡೆದವು.

ಕಾಸರಗೋಡು, ಬೆಂಗಳೂರು, ಹೊನ್ನಾಳಿ, ದಾವಣಗೆರೆ, ಭದ್ರಾವತಿ, ಶಿವಮೊಗ್ಗ, ಚಿಕ್ಕಮಗಳೂರು, ಮೂಲ್ಕಿ ಮುಂತಾದ ದೂರದ ಊರುಗಳಿಂದಲ್ಲದೆ ಸುತ್ತಮುತ್ತಲ ಊರುಗಳಿಂದಲೂ ಸೇರಿದಂತೆ ಸುಮಾರು ೪೫ ಜನ ಕಲಾವಿದರುಗಳು ಇಲ್ಲಿ ತಮ್ಮ ಕಲಾ ಸೇವೆ ನಿರ್ವಹಿಸಿದರು.

ಕಲಾವಿದರಾದ ಸೂರಳಿ ಆರ್. ಗಣೇಶ ಮೂರ್ತಿ ಹಾಗೂ ಅವರ ಮಿತ್ರರಾದ ಆಕಾಶವಾಣಿ ಕಲಾವಿದ ಮಧೂರು ಪಿ. ಬಾಲಸುಬ್ರಮಣ್ಯಂರವರು ೮ ವರ್ಷಗಳ ಹಿಂದೆ, "ಕಾರ್ತಿಕ ದೀಪಾರಾಧನೆ ಸಮಯದಲ್ಲಿ ನಾವೇ ಏಕೆ ಸ್ಥಳೀಯರಿಂದ ಒಂದು ಸಣ್ಣ ಹಾಡುಗಾರಿಕೆ ಕಾರ್ಯಕ್ರಮ ಏರ್ಪಡಿಸಬಾರದು?" ಎಂಬ ಯೋಚನೆಯೊಂದಿಗೆ ಸ್ಥಳೀಯ ಕಲಾಭಿಮಾನಿಗಳ ಸಲಹೆ–ಸಹಕಾರಗಳಿಂದ ಆರಂಭಿಸಿದ ಕಾರ್ಯಕ್ರಮವೇ ಇಂದಿನ ಈ ಉತ್ತಮ ಮಟ್ಟದ ಆರಾಧನಾ ಮಹೋತ್ಸವಕ್ಕೆ ಪ್ರೇರಣೆಯಾಯಿತು.

ಇಂದು ಅನೇಕ ಜನ ಆಕಾಶವಾಣಿ ಮತ್ತು ರಾಷ್ಟ್ರೀಯ ಮಟ್ಟದ ಹಾಡುಗಾರರೂ ಸಹ "ಈ ಕಾರ್ಯಕ್ರಮದಲ್ಲಿ ಕೇವಲ ಹತ್ತು ನಿಮಿಷಗಳಾದರೂ ಕಲಾ ಸೇವೆಗೆ ಅವಕಾಶ ಕೊಡಿ" ಎಂದು ಕೋರಿ ಬರೆದಿರುವ ಪತ್ರಗಳು, ಅಂಥ ಹಲವರು ದಾರಿ ಖರ್ಚನ್ನೂ ಪಡೆಯದೆ ಎಲ್ಲೆಲ್ಲಿಂದಲೋ ಗಿರಿ

ಜೆ. ಎನ್. ಶ್ರೀನಿಧಿ

ಶಿಖರಗಳ ನಡುವಿನ ಶಾಂತಿಯ ನೆಲೆಯನ್ನು ಅರಸಿ ಬಂದು, ಕಲಾ ಸೇವೆಗೈದು, ಧನ ಸಹಾಯವನ್ನೂ ನೀಡಿ ಪ್ರೋತ್ಸಾಹಿಸುವ ಪರಿಯನ್ನು ನೋಡಿದರೆ, ಸೂರಳಿಯ ಈ ಆರಾಧನೋತ್ಸವ ಒಂದು ಉತ್ತಮ ಸಾಂಸ್ಕೃತಿಕ ಕೇಂದ್ರವಾಗುವ ಉಜ್ವಲ ಸಾಧ್ಯತೆ ಕಂಡುಬರುತ್ತದೆ.

ಈಗ ವಿದೇಶದಲ್ಲಿರುವ ಮೂಲತಃ ದಕ್ಷಿಣ ಕನ್ನಡದ ಕಲಾಭಿಮಾನಿಯೊಬ್ಬರು ಕಾರ್ಯಕ್ರಮಕ್ಕೆ ಬಂದುದು ಹಾಗೂ ಖಾಲಿ ಚೆಕ್ಕಿಗೆ ಸಹಿ ಮಾಡಿಕೊಟ್ಟು "ಎಷ್ಟು ಮೊತ್ತ ಬೇಕಾದರೂ ಬರೆದುಕೊಳ್ಳಿ" ಎನ್ನುವ ನಾಲ್ಕಾರು ಕಲಾಭಿಮಾನಿಗಳು ದೊರಕಿದುದು ಈ ಬಾರಿಯ ವಿಶೇಷವಾಗಿತ್ತು. ಅದೇ ವೇಳೆಗೆ ಬಸ್‌ಗಳ ಸುಸೂತ್ರ ಓಡಾಟವಿಲ್ಲದೆ ಅತಿಥಿಗಳು, ಕಲಾಸಕ್ತರು ಪರದಾಡಬೇಕಾಗಿ ಬಂದರೂ ಸಹ, ಸುಮಾರು ೩೫೦ ಜನ ಕಲಾಸಕ್ತರನ್ನು ಆಕರ್ಷಿಸಿದ್ದು ಕಮ್ಮಿಯೇನಲ್ಲ.

ಸೂರಳಿ ರಾಮರಾವ್ ಅಧ್ಯಕ್ಷರಾಗಿ, ಗಣೇಶ ಮೂರ್ತಿ ಕಾರ್ಯದರ್ಶಿಯಾಗಿ ಹಾಗೂ ಸೊನ್ನೆಕುಡಿಗೆ ವಿಶ್ವೇಶ್ವರಯ್ಯ ಖಜಾಂಚಿಯಾಗಿರುವ ಇಲ್ಲಿನ ಆರಾಧನಾ ಸಮಿತಿಯು, ವರ್ಷದಿಂದ ವರ್ಷಕ್ಕೆ ಹೊಸದನ್ನು ಕಲಿತು ಬೆಳೆಯಲಪೇಕ್ಷಿಸುವ, ಮುಖ್ಯವಾಗಿ ಸ್ಥಳೀಯ ಕಲಾವಿದರಿಗೆ ಅವಕಾಶ, ಉತ್ತೇಜನ ನೀಡುವುದನ್ನು ಮೂಲ ಉದ್ದೇಶವಾಗಿ ಹೊಂದಿದೆ. ಇಂಥ ಸಮಿತಿಗಳು ಮಲೆನಾಡಿನ ಅಲ್ಲಲ್ಲಿ ಚಿಗುರೊಡೆದು, ಈಗಷ್ಟೇ ಚಿಗುರಿ ಆಸರೆ ಬಯಸುತ್ತಿರುವ ಅನೇಕ ಯುವ ಕಲಾವಿದರಿಗೆ ಅವಕಾಶ ಕಲ್ಪಿಸಲೆಂದು ಹಾರೈಸುತ್ತೇನೆ.

# ಸಾಮ್ರಾಜ್ಯಶಾಹಿಗಳ ತಂತ್ರಕ್ಕೊಂದು ನೆಪ!

(ಹಿಂದಿನ ಪುಟದಿಂದ)

**ವಿಶ್ವದಾಹಿ ರಕ್ಕಸ ಶಕ್ತಿ**

ಆದ್ದರಿಂದ ಕೊಲ್ಲಿಯ ದೇಶಗಳು ಪರಸ್ಪರ ಕಚ್ಚಾಡುತ್ತಿರಬೇಕು. ಅಲ್ಲಿಗೆ ತಮ್ಮ ಶಸ್ತ್ರಾಸ್ತ್ರ ಕಂಪೆನಿಗಳು ಸಾವಿರಾರು ಕೋಟಿ ಡಾಲರ್‌ಗಳ ಶಸ್ತ್ರಾಸ್ತ್ರಗಳನ್ನು ಸದಾ ರಫ್ತು ಮಾಡುತ್ತ, ಲಾಭ ಗಳಿಸಬೇಕು. ಇಡೀ ಕೊಲ್ಲಿ ಪ್ರದೇಶದ ಮೇಲೆ ಮಾತ್ರವಲ್ಲ, ಆ ಪ್ರಾಬಲ್ಯದ ಮೂಲಕ ಇಡೀ ವಿಶ್ವದ ಮೇಲೆ ತಮ್ಮ ಸಾರ್ವಭೌಮತ್ವ ಸದಾ ಸ್ಥಿರವಾಗಿರಬೇಕು.

ಇದು ಈ ಎಲ್ಲ ಸಾಮ್ರಾಜ್ಯ ಶಾಹಿಗಳ ಏಕೈಕ ಗುರಿ. ಇದನ್ನೇ ಅಮೇರಿಕಾ ಅಧ್ಯಕ್ಷರ ಸಲಹೆಗಾರನೊಬ್ಬ ಆಗಸ್ಟ್ ೨೦ ರ 'ಟೈಂಸ್' ಪತ್ರಿಕೆಯ ಸಂದರ್ಶನದಲ್ಲಿ ಹೇಳಿಕೊಂಡಿದ್ದಾನೆ—"ನಮಗೆ ಇಂಧನ ಬೇಕು. 'ಸ್ವಾತಂತ್ರ್ಯ'ದ ಬಗ್ಗೆ ಮಾತಾಡಲಿಕ್ಕೇನೋ ಚೆನ್ನಾಗಿರುತ್ತದೆ. ಹಾಗೆ ನೋಡಿದರೆ, ಕುವೈತ್, ಸೌದಿ ಅರೇಬಿಯಗಳಂಥವು ಪ್ರಜಾಪ್ರಭುತ್ವ ದೇಶಗಳೇ ಅಲ್ಲ. ಅಲ್ಲದೆ ಅವು ಕಿತ್ತಳೆಹಣ್ಣು ರಫ್ತು ಮಾಡುವಂತಿದ್ದರೆ ನಾವು ಈ ಯುದ್ಧದ ಬಗ್ಗೆ ತಲೆ ಕೆಡಿಸಿಕೊಳ್ಳಬೇಕಿರಲಿಲ್ಲ. ತೈಲಕ್ಕಾಗಿ ನಾವು ಈ ಬಿಕ್ಕಟ್ಟು ಸೃಷ್ಟಿಸುವುದು ಅನಿವಾರ್ಯವಾಗಿದೆ"

ಹೀಗೆ ಯಾವುದಾದರೊಂದು ನೆಪದಲ್ಲಿ ನೆಲೆಗೊಂಡ ಅಮೆರಿಕನ್ ಸೈನ್ಯ ಮತ್ತೆ ಅಲ್ಲೇ ನೆಲೆ ನಿಂತು, ಸುತ್ತಮುತ್ತಲ ದೇಶಗಳ ಮೇಲೆ ಬೆದರಿಕೆ ತಂತ್ರ ಹೂಡುವುದು ಮಾಮೂಲು. ಕೊರಿಯ, ಫಿಲಿಪೈನ್ಸ್, ಇಂಥ ಹಲವಾರು ಉದಾಹರಣೆಗಳಿವೆ. ಸದ್ದಾಮನ ಹುಟ್ಟಡಗಿಸಲು ಬೆಂಬಲಿಸುವವರು (ಅಂಥ ದೇಶಗಳು) ವಿಶ್ವದಾಹಿಯಾದ ಈ ರಕ್ಕಸನನ್ನು ಆಹ್ವಾನಿಸಿದಂತೆಯೇ ಸರಿ.

**ವಿಶ್ವಸಂಸ್ಥೆ, ಅಲಿಪ್ತತೆಯ ವೈಫಲ್ಯ**

ಸಾಮ್ರಾಜ್ಯ ಶಾಹಿಗಳು ತಮ್ಮ ಶಸ್ತ್ರಾಸ್ತ್ರ ಗೋದಾಮುಗಳನ್ನು ರಫ್ತು ಮಾಡಿ ತಾವೇ ಬಲಪಡಿಸಿದ ಇರಾಕ್, ಹೀಗೆ ಅರಬ್ ದೇಶಗಳ ಸ್ವಾತಂತ್ರ್ಯದ, ಹೆಮ್ಮೆಯ, ಸ್ವಾಭಿಮಾನದ ಪ್ರತೀಕವೆಂಬಂತೆ ಸ್ವತಂತ್ರ ನಿಲುವು ತಳೆಯತೊಡಗಿದಾಗ ಅದನ್ನು ಮಣಿಸಲು ವಿಶ್ವ ಸಂಸ್ಥೆಯನ್ನೇ ದುಡಿಸಿಕೊಂಡಿರುವುದು ಸ್ಪಷ್ಟವಾಗಿದೆ.

ಏಕೆಂದರೆ ಕಳೆದ ಸುಮಾರು ೪೦ ವರ್ಷಕ್ಕೂ ಹೆಚ್ಚು ಕಾಲದಿಂದ ದಕ್ಷಿಣ ಆಫ್ರಿಕದ ಕರಿಯರ ಹಾಗೂ ಪ್ಯಾಲೆಸ್ತೀನಿಯರ ಮಾತೃಭೂಮಿಯ ಸ್ವಾತಂತ್ರ್ಯ ಬಿಟ್ಟುಕೊಡುವಂತೆ ದಕ್ಷಿಣ ಆಫ್ರಿಕ ಮತ್ತು ಇಸ್ರೇಲ್ ವಿರುದ್ಧ ಕಠಿಣ ದಿಗ್ಬಂಧನ ವಿಧಿಸಲು ವಿಶ್ವ ಸಂಸ್ಥೆ ನಡೆಸಿದ ಯತ್ನಗಳಿಗೆಲ್ಲ ಇದೇ ಅಮೆರಿಕ, ಬ್ರಿಟನ್‌ನಂಥ ಸಾಮ್ರಾಜ್ಯ ಶಾಹಿಗಳು ಇಂದಿಗೂ ಅಡ್ಡಿಯಾಗಿದ್ದಾರೆ ಅದಕ್ಕಿಂತ ಸರಳವಾದ ನಿರ್ಣಯಗಳ ಮೂಲಕ ಒತ್ತಡ ಹೇರಿದ್ದಕ್ಕೆ ಆ ದೇಶಗಳು ಕಿಲುಬು ಕಾಸಿನ ಬೆಲೆ ಕೊಟ್ಟಿಲ್ಲ. ಆಗೆಂದೂ ಅವುಗಳ ಮೇಲೆ ಯುದ್ಧದ ಬಲಾತ್ಕಾರ ಹೇರಲು ಇರದಿದ್ದ ತುರ್ತು ಈಗೇಕೆ ವಿಶ್ವಸಂಸ್ಥೆಗೆ ಬಂತು? ಇರಾಕಿನ ಕುವೈತ್ ಆಕ್ರಮಣದಿಂದ ಕೇವಲ ಬಡ ದೇಶಗಳಿಗೆ ಮಾತ್ರ ಧಕ್ಕೆಯಾಗಿದ್ದಿದ್ದರೆ ಆಗಲೂ ಈ ಸೋಗಿನ 'ಸ್ವಾತಂತ್ರ್ಯಪ್ರೇಮಿ', 'ಪ್ರಜಾಪ್ರಭುತ್ವವಾದಿ' ಅಮೇರಿಕ ಮತ್ತು ದರ ಹಿಂಬಾಲಕರು ಇದೇ ರೀತಿ ನುಗ್ಗುತ್ತಿದ್ದರೆ? ಕೊನೆ–ಮೊದಲಿಲ್ಲದ ಸಂಘರ್ಷ, ಒತ್ತಾಯಗಳಲ್ಲಿ ವರ್ಷಗಳು ಉರುಳುತ್ತಿದ್ದವು.

ಈ ಸಂದರ್ಭದಲ್ಲೂ ನ್ಯಾಯವಾಗಿ ಆಗಬೇಕಿದ್ದುದೆಂದರೆ, ಕುವೈತನ್ನು ತೆರವು ಮಾಡುವಂತೆ ಇರಾಕನ್ನೊಲಿಸಲು ಹಾಗೂ ಆ ದೇಶ ಕುವೈತಿನ ಮೇಲೆ ಮಾಡುವ ಆರೋಪಗಳನ್ನು ಬಗೆಹರಿಸಲು ವಿಶ್ವಸಂಸ್ಥೆ, ಅಲಿಪ್ತ ಚಳುವಳಿ, ಇಸ್ಲಾಮಿಕ್ ಒಕ್ಕೂಟ–ಇವೇ ಮುಂತಾದ ವೇದಿಕೆಗಳಿಗೆ ಸಾಕಷ್ಟು ಕಾಲಾವಕಾಶ ಕೊಡಬೇಕಿತ್ತು. ಆದರೆ, **ತಮ್ಮ ಕೊನೆ ಮೊದಲಿಲ್ಲದ ಹಿತಾಸಕ್ತಿಗಳನ್ನು ಪ್ರಶ್ನಿಸುವ ಯಾರನ್ನೂ ಕ್ಷಣಮಾತ್ರವೂ ಸಹಿಸದ ಸಾಮ್ರಾಜ್ಯಶಾಹಿಗಳಿಗೆ ಆ ವ್ಯವಧಾನವಿಲ್ಲದ್ದರಿಂದಲೇ ಇಡೀ ಪ್ರಪಂಚದ ಮೇಲೆ ಈ ಯುದ್ಧ ಹೇರಲ್ಪಟ್ಟಿದೆ ಎಂದರೆ ತಪ್ಪಾಗದು.**

ಹೀಗೆ ವಿಶ್ವಸಂಸ್ಥೆ, ಅಲಿಪ್ತ ಚಳುವಳಿ ಮುಂತಾದ ವೇದಿಕೆಗಳಲ್ಲದೆ, ರಷ್ಯಾ, ಭಾರತದಂಥ ದೇಶಗಳೂ ಸಹ ಸಾಮ್ರಾಜ್ಯ ಶಾಹಿಗಳು ಬಿಕ್ಕಟ್ಟು ಸೃಷ್ಟಿಸಿದಾಗ ಅಲ್ಲಿ ಅಸಹಾಯಕ ಮತ್ತು ನಿರುಪಯೋಗಿಯಾಗುತ್ತವೆ ಎಂಬುದು ಈಗ ಮತ್ತೊಮ್ಮೆ ಸಾಬೀತಾಗಿದೆ.

ಅಷ್ಟೇ ಅಲ್ಲ, ಈ ಹಗರಣದಲ್ಲಿ ಹಾಗೂ ಅಮೆರಿಕ ಸೃಷ್ಟಿಸಿದ ಇಂಥ ಎಲ್ಲ ಹಗರಣಗಳಲ್ಲಿ ವಿಶ್ವಸಂಸ್ಥೆ ಕೇವಲ ಅಮೆರಿಕದ ಹಿತಾಸಕ್ತಿಗೇ ಮಣಿಯುತ್ತದೆಂಬುದೂ ಪುನಃ ರುಜುವಾತಾಗಿದೆ. ಅಂಥ ಸಂದರ್ಭಗಳಲ್ಲಿ ರಷ್ಯವೂ ಕೂಡ ಅಮೆರಿಕಕ್ಕೆ ಬೆಂಬಲ ನೀಡಿದೆ. (೧೯೫೦ ರಲ್ಲಿ ಕೊರಿಯದ ಮೇಲೆ, ೬೦ ರಲ್ಲಿ ಕಾಂಗೊ ದೇಶದ ಮೇಲೆ ಅಮೆರಿಕವು ವಿಶ್ವಸಂಸ್ಥೆಯ ಧ್ವಜದ ಅಡಿಯಲ್ಲಿ ಆಕ್ರಮಣ ನಡೆಸಿದಾಗ ರಷ್ಯವೂ ಬೆಂಬಲಿಸಿತ್ತು!) ಕುವೈತನ್ನು ಇರಾಕ್ ಆಕ್ರಮಿಸಿಕೊಂಡಂತೆಯೇ, ಸ್ವತಂತ್ರ ದೇಶವಾಗಿದ್ದ ಸಿಕ್ಕಿಂ ಅನ್ನು ಸ್ವಾಧೀನಪಡಿಸಿಕೊಂಡಿರುವ ಭಾರತ; ಅಫ್ಘಾನಿಸ್ತಾನದಲ್ಲಿ ರಷ್ಯದ ನೇರ ಮಿಲಿಟರಿ ಹಸ್ತಕ್ಷೇಪವನ್ನು ಖಂಡಿಸುವ ಎದೆಗಾರಿಕೆಯಿಲ್ಲದೆ, ಪರೋಕ್ಷವಾಗಿ ಬೆಂಬಲಿಸಿದ್ದ ಭಾರತ–ಇಂದು ಕೊಲ್ಲಿ ಬಿಕ್ಕಟ್ಟಿನಲ್ಲೂ ಸಮರ್ಥ ಪಾತ್ರ ವಹಿಸುವ ಧ್ವನಿಯನ್ನು ಕಳೆದುಕೊಂಡಿದೆಯೆನ್ನುವ ಸಂಗತಿ ನಮಗೆ ಅಪ್ರಿಯವಾದುದಾದರೂ ಸತ್ಯ.

**ಬಿಕ್ಕಟ್ಟಿನ ಪರಿಹಾರಕ್ಕೆ ದಾರಿ**

ಸದ್ದಾಂ ಹುಸೇನ್ ಮತ್ತು ಆತನ ಸರ್ಕಾರ ತನ್ನ ಮಹತ್ವಾಕಾಂಕ್ಷೆಗಾಗಿಯೇ ಕುವೈತನ್ನು ಆಕ್ರಮಿಸಿಕೊಂಡಿರುವುದು ನಿಜವಾದರೂ, ಇಂದು ಇತರ ಅರಬ್ ಮತ್ತು ಮುಸ್ಲಿಂ ರಾಷ್ಟ್ರಗಳ ಬೆಂಬಲ ಗಳಿಸುವುದಕ್ಕಾಗಿಯಾದರೂ, ಈ ಸಮಸ್ಯೆಯನ್ನು ಪ್ಯಾಲೆಸ್ತೀನ್ ಮತ್ತು ಪಶ್ಚಿಮ ಏಷ್ಯದ ಇತರೆಲ್ಲ ಸಮಸ್ಯೆಗಳಿಗೆ ತಳುಕು ಹಾಕಿದ್ದಾನೆ. ಅಂದರೆ, ಪ್ರಸಕ್ತ ಕೊಲ್ಲಿ ಬಿಕ್ಕಟ್ಟನ್ನು ನಿವಾರಿಸುವುದರ ಜೊತೆ ಜೊತೆಗೇ, ಹಿಂದುಳಿದ ಆ ದೊಡ್ಡ ಪ್ರದೇಶದ ಶಾಂತಿಗೆ ದಶಕಗಳಿಂದಲೂ ಮಾರಕವಾಗಿರುವ ಹಲವು ತೀವ್ರ ಸಮಸ್ಯೆಗಳಿಗೆ **ಸಾಮ್ರಾಜ್ಯಶಾಹಿಗಳ ಹಸ್ತಕ್ಷೇಪವಿಲ್ಲದೆ** ಶಾಶ್ವತ ಪರಿಹಾರ ರೂಪಿಸಲು ಈಗೊಂದು ಅವಕಾಶ ದೊರೆತಂತಾಗಿದೆ. ಸಾಮ್ರಾಜ್ಯ ಶಾಹಿಗಳ ಆಕ್ರಮಣ, ಕೈವಾಡ ಇರುವ ತನಕ ಅಲ್ಲಿನ (ವಿಶ್ವದ ಯಾವುದೇ ಭಾಗದಲ್ಲಿನ) ಸಮಸ್ಯೆಗಳಿಗೆ ಪರಿಹಾರ ಕನಸಿನಲ್ಲೂ ಸಾಧ್ಯವಿಲ್ಲ.

ಆದ್ದರಿಂದ, ಕೊಲ್ಲಿ ಯುದ್ಧವನ್ನು ಕೊನೆಗೊಳಿಸಬೇಕೆನ್ನುವ ಎಲ್ಲರೂ ಈ ಕೆಳಗಿನ ನಾಲ್ಕು ಅಂಶಗಳನ್ನು ತಮ್ಮ ತಮ್ಮ ಸರ್ಕಾರದ ಮೂಲಕ ಒತ್ತಾಯಿಸಬೇಕು. ಇದಕ್ಕಾಗಿ ಹೋರಾಟವೂ ಬೇಕಾಗಬಹುದು

೧) ಅಮೆರಿಕ ಮತ್ತು ಅದರ ಮಿತ್ರ ರಾಷ್ಟ್ರಗಳು ಕೂಡಲೇ ಕದನ ವಿರಾಮ ಘೋಷಿಸಿ, ಶಾಂತಿ ಯತ್ನಗಳಿಗೆ ಮರಳಿ ಅವಕಾಶ ಕಲ್ಪಿಸಬೇಕು ಹಾಗೂ ಯಾವುದೇ ಕೊಲ್ಲಿ ರಾಷ್ಟ್ರದಲ್ಲಿ ತಮ್ಮ ಹಸ್ತಕ್ಷೇಪವನ್ನು ಸಂಪೂರ್ಣವಾಗಿ ನಿಲ್ಲಿಸಬೇಕು ೨) ಯಾವುದೇ ಶರತ್ತಿಲ್ಲದೆ ಕುವೈತನ್ನು ತೆರವು ಮಾಡಲು ಎಲ್ಲ ದೇಶಗಳೂ ಇರಾಕನ್ನು ಒತ್ತಾಯಿಸಬೇಕು. ೩) ಪ್ಯಾಲೆಸ್ತೀನಿಯರ ಮಾತೃಭೂಮಿಯನ್ನು ಜನಾಂಗವಾದಿ ಇಸ್ರೇಲ್ ಕೂಡಲೇ ತೆರವು ಮಾಡಬೇಕು ಹಾಗೂ ೪) ಕೊಲ್ಲಿ ದೇಶಗಳ ಮಧ್ಯೆ ಇರುವ ಎಲ್ಲಾ ಸಮಸ್ಯೆಗಳನ್ನೂ ಹೊರಗಿನ ಹಸ್ತಕ್ಷೇಪವಿಲ್ಲದೆ ಮಾತುಕತೆಯ ಮೂಲಕ ಬಗೆಹರಿಸಿಕೊಳ್ಳಬೇಕು.

ಇದರಿಂದ ಮಾತ್ರವೇ ಕೊಲ್ಲಿ ಪ್ರದೇಶದಲ್ಲಿ, ಆ ಮೂಲಕ ವಿಶ್ವದಲ್ಲಿ ಶಾಶ್ವತ ಶಾಂತಿಗೆ ದಾರಿಯಾಗಬಲ್ಲುದು.

ಯಾವುದೇ ದೇಶ ಅಥವಾ ದೇಶಗಳ ಸಮೂಹ (ಉಪ ಖಂಡ) ತನ್ನ ವ್ಯವಹಾರಗಳನ್ನು ತಾನೇ ನಿಭಾಯಿಸಿಕೊಳ್ಳಬಲ್ಲುದು; ಅದಕ್ಕೆ ಅಮೆರಿಕದಂಥ ಒಂದು ದೊಡ್ಡಣ್ಣನ ಮೇಲ್ವಿಚಾರಣೆಯ ಅಗತ್ಯವೇನಿಲ್ಲ—ಎಂಬ ಅರಿವು ಹಾಗೂ ಸಣ್ಣ ದೆವ್ವವನ್ನು ಓಡಿಸುವ ಭ್ರಮೆಯಲ್ಲಿ ದೊಡ್ಡ ಪಿಶಾಚಿಯನ್ನು ಆವಾಹಿಸಿಕೊಳ್ಳುವುದು ಸ್ವಯಂ- ವಿನಾಶಕಾರಿ ಎಂಬ ವ್ಯಾವಹಾರಿಕ ದೃಷ್ಟಿ ಇಂದು ನಮ್ಮೆಲ್ಲ ಬಡ ದೇಶಗಳ ಜನತೆಗೆ ಮೊದಲು ಬರಬೇಕಾಗಿದೆ.

—ಸಿರಿಮನೆ ನಾಗರಾಜ್.

## ಕವಯಿತ್ರಿಯರ ಅವಗಾಹನೆಗೆ

ಕರಾವಳಿ ಲೇಖಕಿಯರ – ವಾಚಕಿಯರ ಸಂಘ, ದಕ್ಷಿಣ ಕನ್ನಡ/ಕಾಸರಗೋಡು—ಇದರ ಆಶ್ರಯದಲ್ಲಿ ದಿ|| ಯು. ಕೃಷ್ಣಾಬಾಯಿ ದತ್ತಿ ನಿಧಿ ರಾಜ್ಯ ಮಟ್ಟದ ಸ್ಪರ್ಧೆಗಾಗಿ ಕವಯಿತ್ರಿಯರಿಂದ ಕವನ ಸಂಕಲನಗಳನ್ನು ಆಹ್ವಾನಿಸಲಾಗಿದೆ. ಸ್ಪರ್ಧೆಯಲ್ಲಿ ವಿಜೇತರಾದವರಿಗೆ ನಗದು ಬಹುಮಾನ ಇದೆ

ನಿಬಂಧನೆಗಳು : ಸ್ಪರ್ಧೆಗೆ ೧೯೯೦-ರಲ್ಲಿ ಪ್ರಕಟವಾದ ಪ್ರಥಮ ಆವೃತ್ತಿಯ ಸಂಕಲನಗಳು ಮಾತ್ರ ಅರ್ಹ. ಸಂಕಲನದ ಮೂರು ಪ್ರತಿಗಳನ್ನು ಈ ಕೆಳಗಿನ ವಿಳಾಸಕ್ಕೆ ಫೆಬ್ರವರಿ ೧೫ರೊಳಗೆ ತಲುಪುವಂತೆ ಕಳುಹಿಸಬೇಕು. ವಿಳಾಸ : ಮನೋರಮಾ ಭಟ್, ಕಾರ್ಯದರ್ಶಿ, ಕರಾವಳಿ ಲೇಖಕಿಯರ ವಾಚಕಿಯರ ಸಂಘ, ಉದಯರವಿ ಮುದ್ರಣಾಲಯ, ಕೇಪ್ಳ ರು ರಸ್ತೆ, ಕಾರ್ಕಳ, ದ.ಕ

## ಮಂದಿರ-ಮಸೀದಿ ವಿವಾದ ಕುರಿತು 'ವೇದಿಕೆ'ಯ ಸಂವಾದಕ್ಕೆ ೨ ಪ್ರತಿಕ್ರಿಯೆಗಳು

ಪ್ರಿಯರೆ,

೧೩-೧-೧೯೯೧ರ 'ಮುಂಜಾವು'ನಲ್ಲಿ "ಸಂವಾದದ 'ವೇದಿಕೆ'ಗೆ ತೆರೆ; ಮುಖ್ಯಾಂಶಗಳ ಸಮೀಕ್ಷೆ" ಎನ್ನುವುದನ್ನು ಓದಿದ್ದೇನೆ, ಸಂತಸ ಪಟ್ಟಿದ್ದೇನೆ. ನಿಮ್ಮ ವಿಶಾಲ ದೃಷ್ಟಿಗಾಗಿ ಮತ್ತು ನೈತಿಕ ಸಾಹಸಕ್ಕಾಗಿ ನಿಮ್ಮನ್ನು ಅಭಿನಂದಿಸುತ್ತಿದ್ದೇನೆ. ನಾನು ಉಡುಪಿಯಲ್ಲಿ ಅದೇ ದೃಷ್ಟಿಯ ಭಾಷಣ ಮಾಡಿದ್ದೆ. ಬೆದರಿಕೆಯ ಪತ್ರಗಳು ಮತ್ತು ಬೆದರಿಕೆಯ ದೂರವಾಣಿ ಕರೆಗಳು ಅನಾಮಧೇಯ ರಾಮಭಕ್ತರುಗಳಿಂದ ಬಂದಿದ್ದವು !

**—ಡಾ|| ಪ. ನಾರಾಯಣ ರಾವ್,**
ಸಂಚಾಲಕರು, ಬಳಕೆದಾರರ ವೇದಿಕೆ,
ಉಡುಪಿ.

§ § §

ಕೆಳಗಿನ ಪತ್ರ ಸಾಮಾನ್ಯವಾಗಿ ಎಂದೂ ಪತ್ರವನ್ನೇ ಬರೆಯದ ಒಬ್ಬ ಆಪ್ತ ಗೆಳೆಯನದು. —ಸಂ.)

ಪ್ರಿಯ ನಾಗರಾಜ,

ನಿನ್ನ ಪತ್ರಿಕೆಯ 'ವೇದಿಕೆ'ಯ ಸಂವಾದ ತುಂಬಾ ಚೆನ್ನಾಗಿತ್ತು. ಯಾವುದೇ ಒಂದು ಸಣ್ಣ ಪತ್ರಿಕೆಯೂ ಈ ಬಗ್ಗೆ ಈ ನಿಟ್ಟಿನಲ್ಲಿ ಯೋಚನೆಯನ್ನು ಮಾಡದೇ ಇರುವ ಸ್ಥಿತಿಯಲ್ಲಿರುವಾಗ ನಿನ್ನ ಈ ಪ್ರಯತ್ನ ತುಂಬಾ ಖುಷಿಯಾಗುತ್ತೆ. ಸ್ಥಳೀಯರ, ಓದುಗರ ಅಭಿಪ್ರಾಯಕ್ಕೆ ವೇದಿಕೆ ದೊರೆತರೆ ಸ್ವಲ್ಪ ಮಟ್ಟಿಗಾದರೂ ವಾತಾವರಣ ತಿಳಿಯಾಗುತ್ತೆ. ಕಡೇ ಪಕ್ಷ ತೀರಾ ಕೋಮುವಾದಿಗಳಲ್ಲವಾದರೂ, ಆ ಹಾದಿಯಲ್ಲಿರುವವರನ್ನಾದರೂ ನಿನ್ನ ಸಮೀಕ್ಷೆ ಚಿಂತಿಸುವಂತೆ ಮಾಡಬಲ್ಲದು ಅಂದುಕೊಂಡಿದ್ದೇನೆ.

ಭಾವನಾತ್ಮಕತೆಯಿಂದ ಹೊರತಾಗಿ ಚಾರಿತ್ರಿಕವಾಗಿ ಸಮಸ್ಯೆಯ ಮೂಲ ಹುಡುಕುವ ಪ್ರಯತ್ನವಾಗಲಿ, ಮಾನವೀಯತೆಯ ನೆಲೆಯಲ್ಲಿ ಸಮಸ್ಯೆಯನ್ನು ಪರಿಹರಿಸುವ ಪ್ರಯತ್ನವಾಗಲಿ, ಅಥವಾ ಕೊನೆಗೆ ಕಾನೂನಿನ ಚೌಕಟ್ಟಿಗೆ ಒಪ್ಪಿಸಿಕೊಳ್ಳುವುದಕ್ಕೇ ಆಗಲಿ ನಾವು ತಯಾರಾಗದೆ, ಬರಿಯ ಭಾವನಾತ್ಮಕತೆಯ (emotion) ಮೇಲೆ ಆಟವಾಡುತ್ತಿರುವಂತಹ ಈ ಕೆಟ್ಟ ಪರಿಸ್ಥಿತಿಯಲ್ಲಿ ಇಂತಹ 'ತಿಳಿ ಹೇಳುವ' ಪ್ರಯತ್ನ ಖಂಡಿತಾ ಸ್ವಾಗತಾರ್ಹ.

**—ಟಿ ಎಸ್. ವೇಣುಗೋಪಾಲ್,**
(ಉಪನ್ಯಾಸಕರು,
ಸರ್.ಎಂ.ವಿ. ಕಾಲೇಜು, ಭದ್ರಾವತಿ.)

'MUNJAVU' Kannada Weekly, KOPPA-CHM. Phone : 114 KRNS 19

## ಉದಯ ಶಂಕರ್‌ಗೆ ೪ನೇ ರ‍್ಯಾಂಕ್

ಮೈಸೂರು : ಶೃಂಗೇರಿಗೆ ಸಮೀಪದ ಸುಂಕುರ್ಡಿಯ ಎಚ್. ಜಿ ಉದಯ ಶಂಕರ್ ಇವರು ಕಳೆದ ಬಾರಿಯ ಮೈಸೂರು ವಿಶ್ವವಿದ್ಯಾನಿಲಯದ ಅಂತಿಮ ಎಂ ಬಿ. ಬಿ.ಎಸ್. ಪರೀಕ್ಷೆಯಲ್ಲಿ ನಾಲ್ಕನೇ ರ‍್ಯಾಂಕ್ ಗಳಿಸಿದ್ದಾರೆ.

ಇವರು ಸುಂಕುರ್ಡಿಯ ಗಣೇಶ್‌ರಾವ್ ರವರ (ತಮ್ಮಣ್ಣಯ್ಯ ಎಂದೇ ಖ್ಯಾತಿ) ಮಗನಾಗಿದ್ದು, ಪಿ.ಯು.ಸಿ ವರೆಗೆ ಶೃಂಗೇರಿಯಲ್ಲಿ ಓದಿದ್ದರು.

ಈಗ ಹೌಸ್ ಸರ್ಜನ್ ಆಗಿ ವೈದ್ಯಕೀಯ ತರಬೇತಿ ಪಡೆಯುತ್ತಿರುವ ಇವರಿಂದ ಮುಂದೆ ಊರಿಗೆ ಇನ್ನೂ ಹೆಚ್ಚಿನ ಕೀರ್ತಿ ಬರಲಿ ಎಂದು ಹಾರೈಕೆ.

(ವರದಿ : ಎಚ್.ಎಂ ನಾಗರಾಜರಾವ್)

# ಮಾನಸಿಕ ಚಿಕಿತ್ಸೆ ಮತ್ತು ಮಹತ್ವ ರೋಗಿಯ ಕುಟುಂಬದವರಿಗೂ ಅಗತ್ಯ

ಹರಿಹರಪುರ : "ಮಾನಸಿಕ ವ್ಯಕ್ತಿಗೆ ನೀಡುವ ಚಿಕಿತ್ಸೆ ಮತ್ತು ಮಹತ್ವವನ್ನು ಕುಟುಂಬದ ಎಲ್ಲಾ ಸದಸ್ಯರಿಗೂ ಕೊಡಬೇಕು. ಭೂತ-ಪ್ರೇತಗಳ ಬಾಧೆಯಿಂದ ತೊಂದರೆಯಾಯಿತೆಂದು ಭಾವಿಸಿ ಹಣ ಮತ್ತು ಕಾಲವನ್ನು ಬೇರೆ ರೀತಿಯಲ್ಲಿ ವ್ಯಯ ಮಾಡುವ ಬದಲು ಮನೋ ವೈದ್ಯಕೀಯ ಚಿಕಿತ್ಸೆ ಕೊಡಿಸಬೇಕು." ಎಂದು ತೀರ್ಥಹಳ್ಳಿಯ ಮಾನಸ ನರ್ಸಿಂಗ್ ಹೋಂನ ಡಾ|| ಅರುಣಾಚಲ ಇಲ್ಲಿ ಹೇಳಿದರು

ಅವರು ಇಲ್ಲಿನ ರಾಷ್ಟ್ರೋತ್ಥಾನ ಬಳಗದ ಆಶ್ರಯದಲ್ಲಿ ಜ. ೧೩ರಂದು "ಮಲೆನಾಡಿನಲ್ಲಿ ಮಾನಸಿಕ ಸಮಸ್ಯೆ ಮತ್ತು ಪರಿಹಾರ" ಕುರಿತು ಉಪನ್ಯಾಸ ನೀಡಿದರು.

ಇಂಥ ಸಮಸ್ಯೆಗಳಿಗೆ ದೇವರ ಶಕ್ತಿಯನ್ನು ಜನ ನಂಬುವುದರಿಂದ ಮತ್ತು ಅದರಿಂದಾಗಿ ಮಾನಸಿಕವಾಗಿ ಪರಿಹಾರ ಕಾಣುವುದರಿಂದ, ಚಿಕಿತ್ಸೆಯ ಜೊತೆಗೆ ದೇವರ ನಂಬಿಕೆ, ಹರಕೆ ಮುಂತಾದುವುಗಳನ್ನೂ ನಂಬಿದರೆ ತಪ್ಪೇನಿಲ್ಲ ಎಂದ ಅವರು, ಕೆಲವು ಪ್ರಮುಖ ಮಾನಸಿಕ ತೊಂದರೆಗಳಾದ ಖಿನ್ನತೆ (ಡಿಪ್ರೆಶನ್), ಸಮೂಹ ಸನ್ನಿ (ಮಾಸ್ ಹಿಸ್ಟೀರಿಯ), ವಂಶಪಾರಂಪರ್ಯವಾದ ಮನೋವಿಕಲತೆಗಳು ಮುಂತಾದ ಬಗ್ಗೆ ವಿವರಿಸಿದರು. ಹಾಗೂ ಸಭಿಕರ ಪ್ರಶ್ನೆಗಳಿಗೆ ಉತ್ತರಿಸಿದರು.

ಕವಿಲುಕೊಡಿಗೆ ಶ್ರೀನಿವಾಸ್ ಅಧ್ಯಕ್ಷತೆ ವಹಿಸಿದ್ದರು. ರಾಮಪ್ರಸಾದ್ ಸ್ವಾಗತಿಸಿ, ಭಾಸ್ಕರಾಚಾರ್ ವಂದಿಸಿದರು. (ಶ್ರೀನಿಧಿ)

## ಗೋಬರ್ ಅನಿಲ ಸ್ಥಾವರ ಪ್ರಾತ್ಯಕ್ಷಿಕೆ

ಶೃಂಗೇರಿ : ಇಲ್ಲಿನ ಸಿಂಡಿಕೇಟ್ ಬ್ಯಾಂಕ್ ಶಾಖೆಯು ವಿದ್ಯಾರಣ್ಯಪುರದಲ್ಲಿ ಗೋಬರ್ ಅನಿಲ ಸ್ಥಾವರದ ಬಗ್ಗೆ ಪ್ರಾತ್ಯಕ್ಷಿಕೆ ಮತ್ತು ವಿವರಣೆ ಕಾರ್ಯಕ್ರಮವೊಂದನ್ನು ಈಚೆಗೆ ಏರ್ಪಡಿಸಿತ್ತು.

ಅತಿಥಿಯಾಗಿದ್ದ ಮಂಡಲ ಪ್ರಧಾನ ಶಿವಪ್ಪ ಹೆಗ್ಡೆಯವರು, ಗೋಬರ್ ಅನಿಲ ಸ್ಥಾವರಗಳನ್ನು ಹೆಚ್ಚೆಚ್ಚು ರೈತರು ಉಪಯೋಗಿಸಬೇಕೆಂದು ಕರೆಯಿತ್ತರಲ್ಲದೆ, ಇದಕ್ಕೆ ಸಾಲದ ನೊತ್ತವನ್ನು ಹೆಚ್ಚಿಸುವಂತೆ ಅಧಿಕಾರಿಗಳಿಗೂ ಮನವಿ ಮಾಡಿದರು.

ತರಬೇತಿದಾರರಾಗಿದ್ದ ಗಂಗಾಧರಪ್ಪ, ಘಟಕ ಸ್ಥಾಪನೆಯ ಬಗ್ಗೆ ಮಾಹಿತಿಯನ್ನೂ, ಬ್ಯಾಂಕಿನ ಗ್ರಾ ಅ. ಅಧಿಕಾರಿ ಮಾಣಿಕ್ಯ ಸುಂದರಂ ಈ ಯೋಜನೆಗೆ ಸಾಲ ಪಡೆವ ವಿಧಾನ ಮತ್ತು ಸಬ್ಸಿಡಿಯ ವಿವರಗಳನ್ನೂ ನೀಡಿದರು.

ಮ್ಯಾನೇಜರ್ ಪಿ ಆರ್. ಪೈ ಸ್ವಾಗತಿಸಿ, ಮಂಜುನಾಥ ಸ್ವಾಮಿ ವಂದಿಸಿದರು.

(ವರದಿ: ಪಾಪಣ್ಣ.)

# ಗಿರಿಜನರ ಕ್ಷೇಮಾಭಿವೃದ್ಧಿ ಸಂಘ

ಕೊಪ್ಪ : ಗಿರಿಜನರ ಅಭಿವೃದ್ಧಿಗಾಗಿ ಮತ್ತು ಶೋಷಣೆಯ ವಿರುದ್ಧ ಹೋರಾಟಕ್ಕಾಗಿ ಶೃಂಗೇರಿ, ಕೊಪ್ಪ, ನ. ರಾ. ಪುರ ತಾ||ಗಳ ಗಿರಿಜನರು ಒಟ್ಟು ಸೇರಿ, ತಮ್ಮ ಕುಲದೇವತೆಯ ಹೆಸರಿನಲ್ಲಿ 'ಅಂಬಾ ಭವಾನಿ ಗಿರಿಜನೋದ್ಧಾರ ಸಂಘ'ವನ್ನು ಸ್ಥಾಪಿಸಿದ್ದಾರೆ.

ಜ. ೬ ರಂದು ನಡೆದ ಈ ಸಂಘದ ಉದ್ಘಾಟನಾ ಸಭೆಯಲ್ಲಿ ಸುಮಾರು ೩೦೦ ಜನ ಭಾಗವಹಿಸಿದ್ದರು.

ಗಿರಿಜನರಿಗಾಗಿ ಇರುವ ವಿವಿಧ ಯೋಜನೆಗಳಲ್ಲಿ ಆಗುತ್ತಿರುವ ಅನ್ಯಾಯ ಮತ್ತು ಅಕ್ರಮಗಳನ್ನೂ, ಗಿರಿಜನರ ಮೇಲಿನ ಇನ್ನಿತರ ರೀತಿಯ ಶೋಷಣೆ ಮತ್ತು ದಬ್ಬಾಳಿಕೆಗಳನ್ನೂ ಸಭೆಯಲ್ಲಿ ಭಾಷಣಕಾರರು ಖಂಡಿಸಿದರು.

### ಪದಾಧಿಕಾರಿಗಳು

ಕೆ. ವಿ. ಚಂದ್ರಶೇಖರ್, ಕೆಸವೆ (ಅಧ್ಯಕ್ಷರು), ಡಿ ಟಿ ಗೋಪಾಲ್, ದೋರ್‌ಗಲ್ (ಉಪಾಧ್ಯಕ್ಷರು), ಕೆ. ಎಸ್. ಮಹೇಶ್, ಕೆಸರುಕುಡಿಗೆ (ಕಾರ್ಯದರ್ಶಿ), ಕೆ.ವೈ. ಕೃಷ್ಣಗೌಡ, ಕೆರೆಕೊಳಲು, ಗೋವಿಂದಪ್ಪ, ಗುಬ್ಬು ಧರ್ಮೇಂದ್ರ, ಕಾಂಚಿನಗರ (ಸಹ ಕಾರ್ಯದರ್ಶಿಗಳು). ವಿಠಲ ನಾಯ್ಕ್, ಕರ್ಕಿ (ಸಂಚಾಲಕರು), ಶ್ರೀಮತಿ ಸುಮತಿ ಸುಬ್ರಮಣ್ಯ, ಶೃಂಗೇರಿ (ಮಹಿಳಾ ಸಂಚಾಲಕರು), ಉದಯ ಕುಮಾರ್ ಶೃಂಗೇರಿ (ಖಜಾಂಚಿ), ಟಿ ನಾಗೇಶ್, ಶೃಂಗೇರಿ (ಗೌರವಾಧ್ಯಕ್ಷರು), ಸಿ ಬಿ ಮಂಜುನಾಥಗೌಡ, ಶೃಂಗೇರಿ (ಸಲಹಾ ಮಾರ್ಗದರ್ಶಿ) ಮತ್ತು ೮ ಮಂದಿ ಕಾರ್ಯಕಾರಿ ಸದಸ್ಯರು.

### ತಾಲ್ಲೂಕುವಾರು ಅಧ್ಯಕ್ಷರುಗಳು

ಶೃಂಗೇರಿ ತಾಲ್ಲೂಕು : ಶ್ರೀನಿವಾಸ್, ಕೈಮನೆ; ನ.ರಾ. ಪುರ ತಾ|| : ಲಕ್ಷ್ಮಣ, ದರ್ಭಗುಣಿ; ಕೊಪ್ಪ ತಾ|| : ರವೀಂದ್ರ ನಾಯ್ಕ್, ಗೋಳ್ಗಾರ್.

## ಕೊಪ್ಪದಲ್ಲಿ ಆಯುರ್ವೇದ ಆಸ್ಪತ್ರೆ

ಕೊಪ್ಪ : ಇಲ್ಲಿನ ಎ. ಎಲ್. ಎನ್. ರಾವ್ ಸ್ಮಾರಕ ಆಯುರ್ವೇದ ಕಾಲೇಜಿಗೆ ಸಂಯೋಜನೆಗೊಂಡ ಆಯುರ್ವೇದ ಆಸ್ಪತ್ರೆಯು ಜ. ೧೭ ರಿಂದ ಬಾಳಗಡಿಯಲ್ಲಿ ಪ್ರಾರಂಭವಾಗಿದೆ. ಸದ್ಯ ಐದು ಹಾಸಿಗೆಗಳು ಮತ್ತು ಹೊರ ರೋಗಿಗಳ ವಿಭಾಗ ಹೊಂದಿರುವ ಇದನ್ನು ಶೀಘ್ರದಲ್ಲಿಯೇ ಐವತ್ತು ಹಾಸಿಗೆಗಳುಳ್ಳ ಆಸ್ಪತ್ರೆಯನ್ನಾಗಿ ವಿಸ್ತರಿಸುವ ಕಾರ್ಯ ಆರಂಭವಾಗಿದೆ. ಸಾರ್ವಜನಿಕರು ಈ ಆಸ್ಪತ್ರೆಯ ಸೌಲಭ್ಯವನ್ನು ಪಡೆಯುವಂತೆ ಆಯುರ್ವೇದ ಕಾಲೇಜು ಪ್ರಿನ್ಸಿಪಾಲ್ ಡಾ|| ಆನಂದ್ ಜೋಶಿ ಕೋರಿದ್ದಾರೆ.

## ರಾಜ್ಯಮಟ್ಟದ ಕ್ವಿಜ್ ಸ್ಪರ್ಧೆ: ಹರಿಹರಪುರ ಕಿರಿಯ ಕಾಲೇಜು ಪ್ರಥಮ

ಹರಿಹರಪುರ : ಇಲ್ಲಿನ ಆ ರಾ. ಸ ಪದವಿ ಪೂರ್ವ ಕಾಲೇಜು ಜ ೧೯ ರಂದು ತಿಪಟೂರಿನ ಉದಯ ಭಾರತಿ ಪ ಪೂ. ಕಾಲೇಜಿನಲ್ಲಿ ನಡೆದ ರಾಜ್ಯ ಮಟ್ಟದ ಅಂತರ ಕಾಲೇಜು ಕ್ವಿಜ್ ಸ್ಪರ್ಧೆಯಲ್ಲಿ ಪರ್ಯಾಯ ಪಾರಿತೋಷಕ ಪಡೆದಿದೆ.

ಈ ಕಾಲೇಜಿನ ಕೆ. ಎಸ್. ಅನಿಲ್ ಕುಮಾರ್ ಪ್ರಥಮ ವೈಯಕ್ತಿಕ ಬಹುಮಾನವನ್ನೂ, ಟಿ. ಕೆ. ಸುಧೀಂದ್ರ ತೃತೀಯ ವೈಯಕ್ತಿಕ ಬಹುಮಾನವನ್ನೂ ಪಡೆದು ಮೇಲ್ಕಂಡ ಪಾರಿತೋಷಕವನ್ನು ಎರಡನೆಯ ವರ್ಷವೂ ಗೆದ್ದು ತಂದಿದ್ದಾರೆ. ಇದೇ ವಿದ್ಯಾರ್ಥಿಗಳು ಕಳೆದ ಬಾರಿಯೂ ಕೂಡಾ ಈ ಪಾರಿತೋಷಕವನ್ನು ಗೆದ್ದು ತಂದಿದ್ದರು

## ಕುಷ್ಠರೋಗದ ಬಗ್ಗೆ ತಿಳುವಳಿಕೆ

ಹರಿಹರಪುರ : ಇಲ್ಲಿನ ಪ್ರಾ. ಆರೋಗ್ಯ ಕೇಂದ್ರದಲ್ಲಿ ಕುಷ್ಠರೋಗ ಮತ್ತು ಅದರ ಚಿಕಿತ್ಸೆ ಹಾಗೂ ಸಂಘ ಸಂಸ್ಥೆಗಳ ಪಾತ್ರ ಕುರಿತು ಆರೋಗ್ಯ ಸಹಾಯಕ ರಾಮಮೂರ್ತಿ ಅವರಿಂದ ಈಚೆಗೆ ಪರಿಣಾಮಕಾರಿಯಾದ ಭಾಷಣ ನಡೆಯಿತು. ರಾಷ್ಟ್ರೋತ್ಥಾನ ಬಳಗದ ಸಹಯೋಗದೊಂದಿಗೆ ನಡೆದ ಈ ಕಾರ್ಯಕ್ರಮದಲ್ಲಿ, ನೇತ್ರದಾನದ ಬಗ್ಗೆಯೂ ಬಳಗದ ಸದಸ್ಯರು ತೀವ್ರ ಆಸಕ್ತಿ ವ್ಯಕ್ತಪಡಿಸಿದರು.

---

ಭಾವಗೀತೆ ಸ್ಪರ್ಧೆಯಲ್ಲಿ ಬಿ. ಪ್ರಕಾಶ ತೃತೀಯ ಸ್ಥಾನ ಪಡೆದಿದ್ದಾರೆ.

(ವರದಿ: ಅನಿಲ್

# ಕನ್ನಡ ಸಾಹಿತ್ಯ ಪರಿಷತ್ತು : ತಿಂಗಳಿಗೊಂದು ಕಾರ್ಯಕ್ರಮ

ಹರಿಹರಪುರ : ಕೊಪ್ಪ ತಾ|| ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸಭೆ ಜ. ೨೦ ರಂದು ಇಲ್ಲಿ ಪರಿಷತ್ತಿನ ತಾ|| ಅಧ್ಯಕ್ಷ ಕೆ. ಜಿ ಎಗ ಶಾಸ್ತ್ರಿಯವರ ಅಧ್ಯಕ್ಷತೆಯಲ್ಲಿ ನಡೆದು, ೧೯೯೧ನೇ ಸಾಲಿನಲ್ಲಿ ತಾಲ್ಲೂಕಿನ ವಿವಿಧ ಕೇಂದ್ರಗಳಲ್ಲಿ ಹಲವಾರು ಚಟುವಟಿಕೆಗಳನ್ನು ಕನಿಷ್ಠ ತಿಂಗಳಿಗೊಂದರಂತೆ ಹಮ್ಮಿಕೊಳ್ಳಲು ನಿರ್ಣಯಿಸಲಾಯಿತು.

ಮೊದಲ ಕಾರ್ಯಕ್ರಮವಾಗಿ **ತಾ. ೨೪-೨-೯೧** ರಂದು ಹರಿಹರಪುರದಲ್ಲಿ **ಪ್ರಬಂಧ ರಚನಾ ಸಮ್ಮಟಿವನ್ನು** ನಡೆಸಲಾಗುವುದು. ೮ನೇ ತರಗತಿಯಿಂದ ಕಾಲೇಜಿನ ಅಂತಿಮ ತರಗತಿವರೆಗಿನ, ಆಸಕ್ತ ವಿದ್ಯಾರ್ಥಿಗಳು ಇದರಲ್ಲಿ ಭಾಗವಹಿಸಬಹುದು. ಆಸಕ್ತರು ತಮ್ಮ ಹೆಸರು ಮತ್ತು ತರಗತಿಯ ವಿವರಗಳನ್ನು ತಾ. ೧೭.೨.೯೧ ರೊಳಗೆ ತಲುಪುವಂತೆ ಎ. ಎಗ. ಸೇರಿಗಾರ್; ಕಾರ್ಯದರ್ಶಿ, ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್, ಹರಿಹರಪುರ-ಇವರಿಗೆ ಕಳುಹಿಸಬೇಕು.

ಕಮ್ಮಟ ನಡೆಯುವ ಸ್ಥಳ, ಸಮಯ ಮತ್ತು ನಿಬಂಧನೆಗಳನ್ನು ಮುಂದೆ ತಿಳಿಸಲಾಗುವುದು.

# ಸಮಸ್ಯೆನಿವಾರಣೆಗೆಪೌರಪ್ರಜ್ಞೆಒತ್ತಾಯಿಸಲಿ

ಒಂದು ಪತ್ರ

ಪ್ರಿಯರೆ,

ಶಂಕರ್ ಸಾರಿಗೆ ಸಂಸ್ಥೆ ಕಾರ್ಯ ನಿರ್ವಹಣೆ ಸ್ಥಗಿತಗೊಂಡು **ಒಂದು ತಿಂಗಳಿಗೂ ಹೆಚ್ಚಾಗಿದೆ.** ಕಾರ್ಮಿಕರ ನ್ಯಾಯಯುತ ಹಾಗೂ ಅವಶ್ಯಕ ಬೇಡಿಕೆಗಳನ್ನು ಆಡಳಿತ ಮಂಡಳಿಯವರು ಕಾರ್ಮಿಕ ದ್ವೇಷ ಮತ್ತು ಹಟ್ಟ ಛಲದಿಂದ ನಿರ್ಲಕ್ಷಿಸುತ್ತಿರುವುದು ಎಲ್ಲರಿಗೂ ಗೊತ್ತಾಗಿರುವ ವಿಚಾರ.

ಇದರಿಂದ ಈ ಭಾಗದ ಸಂಪರ್ಕ ವ್ಯವಸ್ಥೆ ಮತ್ತು ಆರ್ಥಿಕ, ಶೈಕ್ಷಣಿಕ ಚಟುವಟಿಕೆಗಳಿಗೆ ತೀವ್ರವಾಗಿ ಹೊಡೆತ ಬಿದ್ದಿದ್ದರೂ ಜನತೆಯ ಪ್ರತಿಕ್ರಿಯೆ ಸಪ್ಪೆಯಾಗಿರುವುದು ವಿನಾಶಕರವೇ ಸರಿ. "ಕಾರ್ಮಿಕರ ಸಮಸ್ಯೆ ಕಾರ್ಮಿಕರಿಗೆ, ನಮಗ್ಯಾಕೆ?" ಎನ್ನುವ ನಿಷ್ಕ್ರಿಯತೆಯ ಭಾವನೆ ಇಲ್ಲಿ ಎದ್ದು ಕಾಣುತ್ತದೆ

ಇಂಥ ಪ್ರಸಂಗಗಳಲ್ಲೇ ನಮ್ಮ ಪೌರ ಪ್ರಜ್ಞೆ ಬಳಕೆಯಾಗಬೇಕಾಗಿರುವುದು. ಆದರೆ ಇಲ್ಲಿ ಅದರ ಕೊರತೆ ತೀವ್ರವಾಗಿ ಕಾಣುತ್ತಿರುವುದು ವಿಷಾದಿಸಬೇಕಾದ ವಿಚಾರ. ಈ ದಿಕ್ಕಿನಲ್ಲಿ ಈ ಪ್ರದೇಶದ ಎಲ್ಲ ವಿದ್ಯಾರ್ಥಿಗಳು ಮತ್ತು ಜನತೆ ಸಮಯೋಚಿತವಾಗಿ ಪ್ರತಿಕ್ರಿಯಿಸುತ್ತಾರೆಂದು ಭಾವಿಸುತ್ತೇನೆ.

—ನಂದ, ಕೊಪ್ಪ.

## ಅಡಿಕೆ ಧಾರಣೆ

ಶಿವಮೊಗ್ಗ ೨೪-೧-೯೧
ಸರಕು : ೫೦೬೯-೫೬೧೯
ಬೆಟ್ಟೆ : ೪೨೭೧-೪೯೫೨
ಗೊರಬಲು : ೨೭೦೦-೩೬೬೯
ಸಾಗರ ೨೪-೧-೯೧
ಆಪಿ : ೪೯೧೦-೫೮೬೦
ರಾಶಿ ಇಡಿ : ೩೯೦೦-೪೮೯೦
ಚಾಲಿ : ೩೬೮೦-೪೫೧೯
ಸಿಪ್ಪೆ ಗೋಟು : ೧೬೭೭-೨೦೯೬

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ.